# ಶಿಲುಬೆ ದೇವರಾ?




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ಶಿಲುಬೆ ದೇವರಾ?


రచిత

ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ಗ್ರಂಥಕರ್ತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಡಿಸೆಂಬರ್ –2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಟಿ–ಸೃಷ್ಟಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
    ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ಎಲ್ಲರಿಗೂ ಎಲ್ಲದಕ್ಕು ಯಜಮಾನ ದೇವರು. ಆದ್ದರಿಂದ ಆತನನ್ನು ಬ್ರಹ್ಮ ಎಂದು ಹೇಳಿದ್ದಾರೆ. ಬ್ರಹ್ಮ ಎನ್ನುತ್ತಲೇ ಮೂರು ತಲೆಗಳ ಬ್ರಹ್ಮ ಎಂದೊ ಅಥವಾ ನಾಲ್ಕು ತಲೆಗಳ ಬ್ರಹ್ಮ ಎಂದೊ ತಿಳಿದುಕೊಳ್ಳಬೇಡಿ. ಬ್ರಹ್ಮ ಎಂದರೆ **ದೊಡ್ಡದು** ಎಂದು ಅರ್ಥ, ಆದ್ದರಿಂದ ದೇವರನ್ನು ಎಲ್ಲರಿಗಿಂತ ದೊಡ್ಡವನಾಗಿ ಭಾವಿಸಿ ಹೇಳಿದ ಪದ ಬ್ರಹ್ಮ. ದೇವರಿಗೆ ಹೆಸರಿಲ್ಲ. ಬ್ರಹ್ಮ ಎನ್ನುವುದು ಆತನ ವಿಧಾನವನ್ನು ತಿಳಿಸುವ ಬಿರುದೇ ಹೊರತು ಹೆಸರು ಅಲ್ಲ. ಹೆಸರು ಬೇರೆ, ಬಿರುದು ಬೇರೆ. ದೇವರಿಗೆ ಬಿರುದುಗಳು ಹೊರತು ಹೆಸರುಗಳು ಇರುವುದಿಲ್ಲ. ಪ್ರಜ್ಞಾಶಾಲಿ ಎಂದಾಗಲಿ, ಬಹುಮುಖ ಪ್ರಜ್ಞಾಶಾಲಿ ಎಂದಾಗಲಿ ಒಬ್ಬನನ್ನು ಕುರಿತು ಹೇಳಿದಾಗ ಅದು ಅವನ ಘನತೆಯನ್ನು ತೋರಿಸುವ ಬಿರುದಾಗಿರುತ್ತದೆ ಹೊರತು, ಅದು ಅವನ ಹೆಸರಾಗಿ ಇರುವುದಿಲ್ಲ. ಹಾಗೆಯೇ ದೇವರ ಬಗ್ಗೆ ಹೇಳುವವೆಲ್ಲ ಆತನ ಯೋಗ್ಯತೆಯನ್ನು ತಿಳಿಸುವ ಶಬ್ದಗಳೇ ಇರುತ್ತವೆ ಪರಮಾತ್ಮ ಎಂದು ದೇವರನ್ನು ಕುರಿತು ಹೇಳಿದರೂ ಅದು ಆತನ ಹೆಸರಲ್ಲ. ಆತ್ಮಗಿಂತ ಬೇರೆಯಾಗಿ ಇದ್ದಾನೆಂದು ಅರ್ಥ ತಿಳಿಸುವ ಪದವೇ ಪರಮಾತ್ಮ. ಆದ್ದರಿಂದ ದೇವರನ್ನು ಹೆಸರಿಲ್ಲದವನೆಂದು ನಾಮರಹಿತನು ಎಂದಿದ್ದಾರೆ. ಅಷ್ಟೇಅಲ್ಲದೆ ರೂಪ, ನಾಮ, ಕ್ರಿಯಾರಹಿತನೆಂದು ಕೂಡಾ ಹೇಳಿದ್ದಾರೆ. ಹೆಸರಲ್ಲದೆ ದೇವರಿಗೆ ರೂಪವೂ ಸಹ ಇಲ್ಲವೆಂದು ಮತ್ತು ಕೆಲಸವು ಕೂಡಾ ಇಲ್ಲವೆಂದು ಮೇಲಿನ ವಾಕ್ಯದಲ್ಲಿ ತಿಳಿದುಹೋಗುತ್ತಿದೆ. ಹೆಸರಾಗಲಿ, ರೂಪವಾಗಲಿ, ಕೆಲಸವಾಗಲಿ ಇಲ್ಲದವನನ್ನು ಯಾರಾದರೂ ನೋಡಿದ್ದೀರಾ ಎಂದರೆ, ಅಂತಹವನು ಭೂಮಿಮೇಲೆ ಇಲ್ಲವೆಂದೇ ಹೇಳಬಹುದು. ಭೂಮಿಮೇಲೆಯೇ ಅಲ್ಲದೇ ಮತ್ತೆ ಎಲ್ಲಿಯೂ ಸಹ, ಯಾರೂ ಸಹ, ಯಾವ ಕಾಲದಲ್ಲಿಯೂ ಕೂಡಾ ನೋಡಿರುವುದಿಲ್ಲ. ಯಾರೂ ಎಲ್ಲಿಯೂ ಯಾವಾಗಲೂ ನೋಡದವನನ್ನು ಕುರಿತು ಯಾರಿಗೆ ತಿಳಿದಿದೆ ಎಂದರೆ, ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಯಾರಿಗೂ ತಿಳಿಯದಿರುವಾಗ ದೇವರಿದ್ದಾನೆಂದು ಹೇಳುವುದು ಊಹಾ ಜನಿತವಾ ಅಥವಾ ಸತ್ಯವಾ ಎನ್ನುವ ಪ್ರಶ್ನೆ ಬರುತ್ತದೆ. ಊಹಾಜನಿತವಾದರೆ ಅದು ನಿಜವೂ ಆಗಬಹುದು ಅಥವಾ ಸುಳ್ಳೂ ಆಗಬಹುದು. ಹಾಗಲ್ಲದೆ

ದೇವರಿದ್ದಾನೆನ್ನುವುದಕ್ಕೆ ಏನಾದರೂ ಅಥವಾ ಯಾರಾದರೂ ಸಾಕ್ಷಿ ಇರಬೇಕು. ದೇವರನ್ನು ಯಾರೂ ನೋಡದಿರುವಾಗ, ದೇವರನ್ನು ಕುರಿತು ಸಾಕ್ಷಿಕೊಡುತ್ತಾರೆ? ದೇವರನ್ನು ಕುರಿತು ಯಾರೂ ಸಾಕ್ಷಿಯನ್ನು ಕೊಡದಿರುವಾಗ ದೇವರು ಇಲ್ಲವೆನ್ನುವುದಕ್ಕೆ ಆಧಾರ ಏರ್ಪಡುತ್ತದೆ. ಹಾಗಲ್ಲದೆ ದೇವರಿದ್ದಾನೆಂದು ಹೇಳುವುದಕ್ಕೆ ತಪ್ಪದೆ ಒಬ್ಬ ಮನುಷ್ಯ ಅಗತ್ಯ. ಒಬ್ಬ ಮನುಷ್ಯ ದೇವರನ್ನು ಕುರಿತು ದೇವರು ಹೀಗೆ ಇದ್ದಾನೆಂದು ಸಾಕ್ಷಿಯನ್ನು ಕೊಟ್ಟಾಗ, ಆ ಮನುಷ್ಯನ ಮಾತನ್ನನುಸರಿಸಿ ದೇವರಿದ್ದಾನೆನ್ನುವ ಸತ್ಯವು ಲೋಕಕ್ಕೆ ತಿಳಿಯಬಲ್ಲದು. ರೂಪ, ನಾಮ, ಕ್ರಿಯೆಗಳು ಇಲ್ಲದ ದೇವರನ್ನು ಕುರಿತು ಸಾಕ್ಷಿಯನ್ನು ಕೊಡುವ ಮನುಷ್ಯ ಯಾರು? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಅಂತಹವನು ಸಾಧಾರಣ ಮನುಷ್ಯ ಅಲ್ಲವೆಂದು ತಿಳಿದುಹೋಗುತ್ತಿದೆ. ಸಾಧಾರಣ ಮನುಷ್ಯನಲ್ಲದ ಆ ಅಸಾಧಾರಣ ಮನುಷ್ಯ ಯಾರು ಎಂದು ಹುಡುಕಿದರೆ, ಅಂತಹವನು ಕೆಲವು ಸಾವಿರಾರು ವರ್ಷಗಳಿಗೊಂದುಸಲ, ಅಥವಾ ಕೆಲವು ಲಕ್ಷಗಳ ವರ್ಷಗಳಿಗೊಂದು ಸಲವೊ ಭೂಮಿಮೇಲೆ ಹುಟ್ಟಿ, ದೇವರ ಬಗ್ಗೆ ಸಾಕ್ಷಿಯನ್ನು ಕೊಟ್ಟು, ಆತನಿಗೆ ಸಂಬಂಧಿಸಿದ ಸಂಗತಿಗಳೆಲ್ಲವನ್ನು ತಿಳಿಸಿ ಹೋಗುತ್ತಾನೆಂದು ತಿಳಿಯುತ್ತಿದೆ.

ಸಾಧಾರಣ ಮನುಷ್ಯ ಮರಣಿಸಿದ ತಕ್ಷಣ ಪುನಃ ಹುಟ್ಟುತ್ತಿದ್ದಾನೆ. ಆದರೆ ಇಲ್ಲಿ ದೇವರನ್ನು ಕುರಿತು ಹೇಳಿ ಸಾಕ್ಷಿಯನ್ನು ಕೊಡುವವನು ಹಾಗೆ ಹುಟ್ಟುತ್ತಿಲ್ಲ. ಭೂಮಿಮೇಲೆ ದೇವರ ಸಾಕ್ಷಿ ಮನುಷ್ಯರಿಗೆ ಅಗತ್ಯವಾದಾಗ ಮಾತ್ರವೇ ಹುಟ್ಟುತ್ತಿದ್ದಾನೆ. ಹಾಗೆ ಹುಟ್ಟುವವನು ಯಾರಾಗಿರುತ್ತಾನೆ ಎಂದು ಯೋಚಿಸಿದರೆ, ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ ಏಳನೇ ಶ್ಲೋಕದಲ್ಲಿ **"ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ, ಅಭ್ಯುತ್ಥಾನ ಮದರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥** ಭೂಮಿಮೇಲೆ ಯಾವಾಗ ಧರ್ಮಗಳಿಗೆ ಗ್ಲಾನಿ ಏರ್ಪಟ್ಟು ಅಧರ್ಮಗಳು ವಿಜೃಂಭಿಸಿ ದೇವರ ಮೇಲೆ ಅನುಮಾನ ಏರ್ಪ ಡುತ್ತದೊ, ಆಗ ನನ್ನನ್ನು ನಾನು ಮನುಷ್ಯನಾಗಿ ಹುಟ್ಟಿಬರುತ್ತೇನೆಂದು ದೇವರೇ ಹೇಳಿದ್ದಾನೆ. ಆದ್ದರಿಂದ ಮನುಷ್ಯನಾಗಿ ಬಂದು ದೇವರನ್ನು ಕುರಿತು, ದೇವರ

ಧರ್ಮಗಳನ್ನು ಕುರಿತು ತಿಳಿಸಿ, ಸಾಕ್ಷಿಯಾಗಿ ನಿಲ್ಲುವವನು ಸಾಧಾರಣ ಮನುಷ್ಯನು ಅಲ್ಲವೆಂದು, ಆತನು ದೇವರೇ ಎಂದು ತಿಳಿಯಲ್ಪಡುತ್ತಿದೆ. ದೇವರು ರೂಪ, ನಾಮ, ಕ್ರಿಯಾ ರಹಿತನಾದಾಗ ಆತನು ಭೂಮಿಮೇಲೆ ರೂಪ ಧರಿಸಿ, ಅದಕ್ಕೆ ಒಂದು ಹೆಸರು ಇಟ್ಟುಕೊಂಡು ಮತ್ತು ಧರ್ಮಗಳನ್ನು ತಿಳಿಸುವ ಕೆಲಸವನ್ನು ಇಟ್ಟುಕೊಂಡು ಹುಟ್ಟುತ್ತಾನಾ? ಎಂದು ಯಾರಾದರೂ ಕೇಳುತ್ತಾರೆ. ಅದಕ್ಕೆ ಸಮಾಧಾನ ಏನೆಂದರೇ! ದೇವರನ್ನು ಅದ್ವಿತೀಯನೆಂದು ಹೇಳಬಹುದು. ಅದ್ವಿತೀಯನೆಂದರೇ! ಎರಡು ಆಗದವನೆಂದು, ಏಕವಾಗಿ ಇದ್ದಾನೆಂದು ಹೇಳಬಹುದು. ಅಷ್ಟೇ ಅಲ್ಲದೆ ದೇವರು ದಿವ್ಯವಾದವನೆಂದು ಸಹ ಹೇಳಬಹುದು. ಅದ್ವಿತೀಯನಿದ್ದಾನೆಂದು ಹೇಳುವುದಕ್ಕೆ ಅದ್ವಿತೀಯನೇ ದ್ವಿತೀಯನಾಗಿ ಇಲ್ಲವೇ ದಿವ್ಯವಾದವನಾಗಿ ಹುಟ್ಟಬೇಕಾಗಿ ಬಂದಿದೆ. ದೇವರ ವಿವರ ಭೂಮಿಮೇಲೆ ಯಾರಿಗೂ ತಿಳಿದಿಲ್ಲ. ಆದ್ದರಿಂದ ದೇವರೇ ಹುಟ್ಟಿ ದೇವರ ವಿಷಯಗಳನ್ನು ತಿಳಿಸಬೇಕು. ದೇವರೆಂದರೇ ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಹೇಳಿದ ಮೊದಲ ಧರ್ಮಕ್ಕೆ ವಿರುದ್ಧವಾಗಿ ಅಲ್ಲದೆ ತನ್ನ ಧರ್ಮಕ್ಕೆ ಆತಂಕವಿಲ್ಲದೆ ದೇವರು ಹುಟ್ಟುತ್ತಿದ್ದಾನೆ. ಆದ್ದರಿಂದ ದೇವರ ಜನ್ಮವು ಕೂಡಾ ಶಾಸ್ತ್ರಬದ್ಧವಾಗಿ ಇದೆ. ಧರ್ಮ ವಿರುದ್ಧವಾಗದೆ ಹೇಗೆ ಹುಟ್ಟುತ್ತಿದ್ದಾನೆ ಈ ಚಿಕ್ಕ ಪ್ರತಿಯಲ್ಲಿ ಮುಂದಕ್ಕೆ ಓದಿದರೆ ಅರ್ಥವಾಗುತ್ತದೆ.

ದೇವರ ತನ್ನ ಧರ್ಮಗಳಿಗೆ ವಿರೋಧವಾಗದೆ ಧರ್ಮಬದ್ಧವಾಗಿಯೇ ಶರೀರವನ್ನು ಧರಿಸಿ ಮನುಷ್ಯನಾಗಿ ಹುಟ್ಟುತ್ತಿದ್ದಾನೆಂದು ತಿಳಿಯುತ್ತಿದೆ. ಹಾಗೆ ಹುಟ್ಟಿದವನಿಗೆ ತನ್ನ ಧರ್ಮಗಳನ್ನು ತಿಳಿಸುವುದೇ ಕೆಲಸವಾಗಿದೆ. ಅಲ್ಲಿಯೂ ಕೂಡಾ ಧರ್ಮವಿರುದ್ಧವಾಗದೆ, ಶಾಸ್ತ್ರಬದ್ಧವಾಗಿ ಕೆಲಸಮಾಡುತ್ತಿದ್ದಾನೆ. ದೇವರು ಧರ್ಮ ಪ್ರಚಾರಕ್ಕಾಗಿ ಬಂದು, ಯಾವ ಕೆಲಸವನ್ನು ಮಾಡಿದರೂ ವಾಸ್ತವಕ್ಕೆ ಆತನು ಮಾಡದಂತೆ ಲೆಕ್ಕಿಸಲ್ಪಟ್ಟಿದೆ. ಅದು ಹೇಗೆ ಸಾಧ್ಯವೆಂದು ನಾವು ಅಂದುಕೊಳ್ಳದಂತೆ ಆತನು ಮಾಡಿದಂತೆ ನಾವು ಮಾಡಿದರೂ ಕೆಲಸ ಮಾಡದಂತೆ ಎಂದು, ಕೆಲಸ ಮಾಡಿದಹಾಗೆ ಲೆಕ್ಕಿಸಲ್ಪಡುವುದಿಲ್ಲವೆಂದು, ಅದಕ್ಕೆ ಸೂತ್ರವನ್ನು

ಕೂಡಾ ಹೇಳಿದ್ದಾರೆ. ಆ ಸೂತ್ರದ ಪ್ರಕಾರವಾದರೆ ನಾವು ಕೂಡಾ ಕೆಲಸ ಮಾಡದಂತೆ ಆಗುತ್ತದೆ. ದೇವರು ತನ್ನ ಧರ್ಮಗಳಿಗೆ ವಿರುದ್ಧವಾಗದೆ ಧರ್ಮ ಬದ್ಧವಾಗಿಯೇ ಹುಟ್ಟುತ್ತಿದ್ದಾನೆ ಮತ್ತು ಕೆಲಸವನ್ನು ಮಾಡುತ್ತಿದ್ದಾನೆ. ಆದ್ದರಿಂದ ಆತನು ಹುಟ್ಟಿದಂತೇ, ಕೆಲಸವನ್ನು ಮಾಡದಂತೇ ಆಗುತ್ತಿದೆ. ಅಷ್ಟುದೊಡ್ಡ ದೇವರು ಎಷ್ಟೋ ಚಿಕ್ಕ ಮನುಷ್ಯನಾಗಿ ಹುಟ್ಟಿದರೇ ಆತನನ್ನು ಯಾರು ಗುರುತಿಸುತ್ತಾರೆ? ಕಾಣಿಸುವ ಮನುಷ್ಯನಿಗೆ ಕನಿಷ್ಟ ಬೆಲೆಯೂ ಸಹ ಕೊಡದ ಮನುಷ್ಯರು, ಕಾಣಿಸುವ ಮನುಷ್ಯನಾಗಿರುವ ದೇವರನ್ನು ಗೌರವಿಸುತ್ತಾರಾ? ಯಾರೂ ಗೌರವಿಸುವುದಿಲ್ಲ. ಆತನು ವಿಶೇಷವಾದ ದೈವಜ್ಞಾನವನ್ನು ಹೇಳಿದರೂ, ಕೆಲವರು ಮಾತ್ರ ಸ್ವಲ್ಪ ಬೆಲೆಕೊಟ್ಟರು, ಉಳಿದವರೆಲ್ಲರೂ ಅದೇ ಕೆಲಸವಾಗಿ ಮನುಷ್ಯನಾಗಿ ಬಂದಿರುವ ದೇವರನ್ನು ಅಗೌರವವಾಗಿ ನೋಡುವುದೇ ಅಲ್ಲದೆ, ಅವಮಾನಪಾಲು ಕೂಡಾ ಮಾಡುತ್ತಾರೆ. ಮನುಷ್ಯನಾಗಿ ಬಂದಿರುವ ದೈವಾಂಶ ಹೊಂದಿದ ವ್ಯಕ್ತಿಯನ್ನು ಅವಮಾನಿಸಿದರೆ ನಿಜವಾಗಲೂ ದೇವರನ್ನೇ ಅವಮಾನಿಸಿದಂತಾಗುತ್ತದೆ. ಮನುಷ್ಯನಾಗಿ ಬಂದಿರುವ ಆತನಲ್ಲಿ ದೇವರು, ದೇವರಲ್ಲಿ ಆತನು ಮಿಳಿತವಾಗಿದ್ದಾರೆ, ಆದ್ದರಿಂದ ಆತನನ್ನು (ಭಗವಂತನನ್ನು) ಅವಮಾನಿಸಿದರೆ ನಿಜವಾಗಲು ದೇವರನ್ನು ಅವಮಾನಿಸಿದಂತೆ ಆಗುತ್ತದೆ. ಅಂತಹವರನ್ನು ಮೂಢರೆಂದು ಹೇಳಬಹುದು. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 11ನೇ ಶ್ಲೋಕದಲ್ಲಿ **"ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್, ಪರಂಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್"**, ಶರೀರ ಧರಿಸಿರುವ ನನ್ನನ್ನು ನೋಡಿ, ಮೂಢರಾದವರು ನಾನೇ ಸರ್ವರಿಗೂ ದೇವರೆಂದು ತಿಳಿಯದೆ, ನನ್ನನ್ನು ಸಾಧಾರಣ ಮನುಷ್ಯನಿಗಿಂತ ಹೀನವಾಗಿ ಅವಮಾನಿಸುತ್ತಿದ್ದಾರೆಂದು ಸ್ವತಃವಾಗಿ ದೇವರೇ ಹೇಳಿದ್ದಾರೆ.

ದೇವರು ಭಗವದ್ಗೀತೆಯಲ್ಲಿ ಹೇಳಿದ ವಾಕ್ಯವು ಯಾವುದೂ ಅಸತ್ಯ ಆಗುವುದಿಲ್ಲ. ಆದ್ದರಿಂದ ಆತನು ಹೇಳಿದಂತೆ ಮನುಷ್ಯನಾಗಿ ಬಂದಿರುವ ದೇವರನ್ನು ಮನುಷ್ಯರು ಅವಮಾನಿಸುವುದು ನಡೆಯುತ್ತಿದೆ. ದೇವರೇ

ಮನುಷ್ಯನಾಗಿದ್ದರೆ ಆತನಲ್ಲಿನ ಶ್ರೇಷ್ಠತ್ವವನ್ನು ತಿಳಿಯದ ಮನುಷ್ಯರು, ಆತನು ತಿಳಿಸುವ ಧರ್ಮಗಳನ್ನು ಸ್ವಲ್ಪವೂ ನೋಡದ ಮನುಷ್ಯರು, ಆತನನ್ನು ಸಾಧಾರಣ ಮನುಷ್ಯನಿಗಿಂತ ಹೀನವಾಗಿ ಲೆಕ್ಕಿಸಿ, ಅವಮಾನವಾಗಿ ಮಾತನಾಡುವುದು, ಆತನಿಗೆ ಆತಂಕ ಉಂಟುಮಾಡಿ ಆತನ ಗೌರವವಕ್ಕೆ ಧಕ್ಕೆ ಉಂಟಾಗುವಂತೆ ಕೆಲಸಗಳು ಮಾಡುವುದು ನಡೆಯುತ್ತಿದೆ. ದೈವಜ್ಞಾನವನ್ನು ತಿಳಿಸುವ ಮನುಷ್ಯ ಎಂದರೇ ಮತ್ತಷ್ಟು ಅಸೂಯೆಯಿಂದ ನೋಡುವವರೂ, ಹಿಂಸಿಸುವವರೂ ಎಷ್ಟೋಜನ ಇದ್ದಾರೆ. ಸ್ವಲ್ಪ ದಿನಗಳು ಮಾತ್ರವಿರುವ ಜೀವನದಲ್ಲಿ ತಾನು ಏನೋ ದೊಡ್ಡವರೆನ್ನುವ ಗರ್ವವದಿಂದ ಇರುವವರು, ದೇವರು ದೈವ, ಜ್ಞಾನ ಧರ್ಮ ಎನ್ನುವವುಗಳನ್ನು ಲೆಕ್ಕಮಾಡದೆ, ನಮಗೆ ಅಧಿಕಾರವಿದೆ ಏನಾದರೂ ಮಾಡಬಲ್ಲವೆಂದು, ಮನುಷ್ಯನಾಗಿರುವ ದೇವರನ್ನು ಕೂಡಾ ಅವಮಾನಿಸುವುದೇ ಅಲ್ಲದೆ ಬಾಧಿಸುವುದು ಕೂಡಾ ನಡೆಯುತ್ತಿದೆ. ನಮ್ಮ ಅನುಭವದಲ್ಲಿ ಒಬ್ಬ ಯೋಗಿಯಾಗಿರುವ ನನ್ನನ್ನು ಅವಮಾನವಾಗಿ ಮಾತನಾಡುವುದು ಅನೇಕಸಲ ನಡೆದಿದೆ. ಆ ಘನತೆ ಕೆಳಗಿನಸ್ಥಾಯಿ ಪೋಲೀಸರಿಗೆ ದಕ್ಕಿದೆ. ಯೋಗ, ಜ್ಞಾನವೊಂದರ ಬೆಲೆ ತಿಳಿಯದ ಮನುಷ್ಯರು ಎಂದರೆ ಮೂಢರು, ಆ ವಿಧವಾಗಿ ಮಾಡುತ್ತಾರೆಂದು ದೇವರು ಸ್ವತಃವಾಗಿ ಗೀತೆಯಲ್ಲಿ ಹೇಳಿದ್ದಾನೆ. ಅದರಿಂದ ಎಷ್ಟು ಪಾಪಬರುತ್ತದೊ ಅವರಿಗೆ ತಿಳಿದಿಲ್ಲ. ಒಬ್ಬ ವ್ಯಕ್ತಿ ತಪ್ಪು ಮಾಡದಿದ್ದರೂ ತಪ್ಪು ಮಾಡಿದಂತೆ ಚಿತ್ರೀಕರಿಸಿ, ಆತನನ್ನು ಅವಮಾನಿಸಿದರೆ ಅದರ ಫಲಿತವಾಗಿ ಬರುವಂತಹ ಫಲಿತದಿಂದ, ನಂತರ ಜನ್ಮದಲ್ಲಿ ಕ್ಯಾನ್ಸರ್ ರೋಗ ತಪ್ಪದೆ ಬರುತ್ತದೆಂದು ನಾವು ಬಹಳಸಲ ಹೇಳಿದ್ದೇವೆ. ಸಾಧಾರಣ ಮನುಷ್ಯನನ್ನು ಅನವಶ್ಯವಾಗಿ ಅಪರಾದಿಯಾಗಿ ಚಿತ್ರೀಕಸಿದರೆ ಅದರ ಫಲಿತವು ಕ್ಯಾನ್ಸರಾದರೆ, ಸ್ವತಃವಾಗಿ ದೇವರು ಶರೀರದೊಂದಿಗೆ ಇರುವಾಗ, ಗರ್ವದಿಂದ ಕೂಡಿದ ಮನುಷ್ಯ ಆತನನ್ನು ಅವಮಾನಿಸಿದರೆ, ನಿಜವಾಗಲು ದೇವರನ್ನೇ ಅವಮಾನಿಸಿದಂತಾಗುತ್ತದೆ. ಅಂತಹವನಿಗೆ ಬರುವ ಪಾಪ ಒಂದು ಜನ್ಮಕ್ಕೆ ಅಲ್ಲದೆ, ಎರಡು ಯುಗಗಳ ಕಾಲ ಅನುಭವಿಸಬೇಕಾಗಿ ಬರುತ್ತದೆಂದು ದೇವರೇ ಒಂದು ಸಂದರ್ಭದಲ್ಲಿ ಹೇಳಿದ್ದಾನೆ. ಆದ್ದರಿಂದ ಮನುಷ್ಯ ಅಜ್ಞಾನದಿಂದ

ಕಣ್ಣು ಮುಚ್ಚಿಕೊಂಡುಹೋಗಿ ಎದುರಿಗಿರುವ ಮನುಷ್ಯನಲ್ಲಿನ ದೊಡ್ಡತನವನ್ನು ಗ್ರಹಿಸದೆ ಅವಮಾನವಾಗಿ ಮಾತನಾಡಿದರೂ, ತೊಂದರೆ ಇಟ್ಟರೂ ಅವರಿಗೆ ತಕ್ಕ ಮೂಲ್ಯವು ಲಭಿಸುತ್ತದೆಂದು ಹೇಳುತ್ತಿದ್ದೇವೆ.

ಕೆಲವರಿಗೆ ಮತ ಎನ್ನುವ ಮುಸುಗು ಕಣ್ಣಿಗೆ ಅಡ್ಡಬಂದರೆ, ಅವರು ದೇವರ ಜ್ಞಾನವನ್ನು ಗುರುತಿಸದೆ, ದೈವಜ್ಞಾನವನ್ನು ತಿಳಿಸುವವರನ್ನು ಲೆಕ್ಕಮಾಡದೆ, ಅವಮಾನಪಡಿಸುವ ಸಂದರ್ಭಗಳು ಕೂಡಾ ಇವೆ. ನಮ್ಮ ಅನುಭವದಲ್ಲಿ ನಾವು ದೇವರ ಜ್ಞಾನವನ್ನು ಹೇಳಿದರೆ ಹಿಂದೂಮತದಲ್ಲಿನ ಛಾಂದಸವಾದಿಗಳು ಕೆಲವರು ನಮ್ಮನ್ನು ಪರಮತ ಪ್ರಚಾರಕರಾಗಿ ಚಿತ್ರಿಸಿ ಮಾತನಾಡುವುದು, ನಾವು ಬರೆದ ಭಗವದ್ಗೀತೆಯನ್ನು ನಮ್ಮ ಮುಂದೆಯೇ ಬೆಂಕಿ ಇಟ್ಟು ಸುಟ್ಟುಹಾಕುವುದು ನಡೆದಿದೆ. ಸಂಪ್ರದಿಸಿ ಮಾತನಾಡಿ ತಪ್ಪೊಪ್ಪುಗಳನ್ನು ಗ್ರಹಿಸದೆ ಏಕಪಕ್ಷವಾಗಿ ಪ್ರವರ್ತಿಸುವವರು, ಹಿಂದೂ ಎನ್ನುವ ಹೆಸರಿನಿಂದ ಸಂಘಗಳನ್ನು ಇಟ್ಟುಕೊಂಡು, ಹಿಂದೂಮತವನ್ನು ಉದ್ಧರಿಸುತ್ತೇವೆಂದುಕೊಳ್ಳುವುದು ತಪ್ಪು. ಹಿಂದೂಮತದಲ್ಲಿನ ಯೋಗಿಗಳನ್ನು, ಜ್ಞಾನಿಗಳನ್ನು ಗುರುತಿಸದೆ ಅವಮಾನಿಸಿದರೆ ಮತ ನಿಮ್ಮೊಂದೆ ಬರುವುದಿಲ್ಲ. ನಿಮ್ಮೊಂದೆ ಬರುವುದು ಭಯಂಕರವಾದ ಪಾಪವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಇಲ್ಲಿ ಈ ಚಿಕ್ಕ ಗ್ರಂಥದಲ್ಲಿ ಜ್ಞಾನಪದ್ಧತಿ ಯಲ್ಲಿ, ಇತರ ಮತದಲ್ಲಿನ ಲೋಪವನ್ನು ತಿಳಿಸಿದ್ದೇವೆ ಹೊರತು ನಾವು ಯಾರನ್ನು ಯಾವ ಮತವನ್ನು ಅವಮಾನಿಸಿದಂತಾಗಲಿ, ಇತರ ಮತಗಳನ್ನು ಪ್ರಚಾರ ಮಾಡಿದಂತಾಗಲಿ ಅಂದುಕೊಳ್ಳಬಾರದು. **ಮತವನ್ನು ಅಲ್ಲದೆ ಜ್ಞಾನವನ್ನು, ಧರ್ಮವನ್ನು, ದೈವವನ್ನು ಜ್ಞಾಪಕವಿಟ್ಟುಕೊಂಡು ಈ ಗ್ರಂಥವನ್ನು ಓದಿರೆಂದು ಕೋರುತ್ತಿದ್ದೇವೆ.**

ವಿಶ್ವದಲ್ಲಿರುವ ಸಮುದ್ರಗಳು, ಪರ್ವತ ಶ್ರೇಣಿಗಳು, ವೃಕ್ಷಲತಾದಿಗಳು, ಕ್ರಿಮಿಕೀಟಕ, ಪಶುಪಕ್ಷಿ ಪ್ರಾಣಿ ಸಮೂಹಗಳು, ಸೂಕ್ಷ್ಮ, ಸ್ಥೂಲ ಶರೀರಧಾರಿಗಳಾದ ಮಾನವರು ಮತ್ತು ಅಣುವು ಮೊದಲುಗೊಂಡು ಅಂತರಿಕ್ಷದವರೆಗು ಸಮಸ್ತವು ಸೃಷ್ಟಿಸಲ್ಪಟ್ಟಿರುವವೇ. ಒಂದುಮಾತಿನಲ್ಲಿ ಹೇಳಬೇಕೆಂದರೆ ಆಕಾರವಾಗಲಿ,

ಹೆಸರಾಗಲಿ ಇರುವ ಪ್ರತಿಯೊಂದೂ ಸೃಷ್ಟಿಸಲ್ಪಟ್ಟಿರುವವೆಂದೇ ಹೇಳಬಹುದು. ಹೆಸರಾಗಲೀ, ಆಕಾರವಾಗಲೀ ಇಲ್ಲದಂತಿರುವುದು ಪ್ರಪಂಚದಲ್ಲಿ ಯಾವುದೂ ಇಲ್ಲ. ಆದ್ದರಿಂದ ಎಲ್ಲವೂ ತಯಾರಿಸಲಾಗಿರುವವೇ ಎಂದು ಹೇಳಬಹುದು. ಬದಲಾವಣೆಯಾಗದೆ ಎಂದಿಗೂ ಇರುವ ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವವುಗಳನ್ನು ಪ್ರಪಂಚವು ಎಂದೂ, ಪ್ರಪಂಚದಲ್ಲಿ ಜೀವರಾಶಿಗಳಾಗಿರುವ ಎಲ್ಲವನ್ನು ಜಗತಿ ಎಂದೂ ಕರೆಯುತ್ತಿದ್ದೇವೆ. ಪ್ರಪಂಚವನ್ನು, ಜಗತಿಯನ್ನು ಎರಡನ್ನು ಸೇರಿಸಿ ವಿಶ್ವ ಎನ್ನುತ್ತಿದ್ದೇವೆ. ಪ್ರಪಂಚ+ಜಗತಿ = ವಿಶ್ವ. ವಿಶ್ವ ಸೃಷ್ಟಿಸಲ್ಪಟ್ಟಿದೆ, ಆದ್ದರಿಂದ ಇದನ್ನು ಸೃಷ್ಟಿಸಿದವನು ಯಾರೊ ಒಬ್ಬನಿರಬೇಕು. ಆತನನ್ನೇ ಸೃಷ್ಟಿಕರ್ತ ಎಂದೂ ವಿಶ್ವಕರ್ತ ಎಂದೂ ಕರೆಯುತ್ತಿದ್ದೇವೆ.

ಸರ್ವವನ್ನು ಸೃಷ್ಟಿಸಿದವನು, ಯಾರಿಂದಲು ಸೃಷ್ಟಿಸಲ್ಪಡದವನಾಗಿ ಇದ್ದಾನೆ. ಅಷ್ಟೇ ಅಲ್ಲ ಯಾರಾದರೆ ಸೃಷ್ಟಿಕರ್ತನೋ ಆತನಿಗೆ ಆಕಾರ ಇರುವುದಿಲ್ಲ, ಹೆಸರು ಸಹ ಇರುವುದಿಲ್ಲ. ಇದನ್ನನುಸರಿಸಿ ಸರ್ವಜಗತ್ತಿನೊಂದಿಗಾಗಲಿ, ಪ್ರಪಂಚದೊಂದಿಗಾಗಲಿ ಹೋಲಿಕೆ ಇಲ್ಲದವನಾಗಿ, ವಿಶ್ವಾತೀತನಾದವನು ವಿಶ್ವವನ್ನು ತಯಾರು ಮಾಡಿದ ದೇವರು. ದೇವರು ಸೃಷ್ಟಿಸುವವನೇ ಹೊರತು ಸೃಷ್ಟಿಸಲ್ಪಡದವನು. ಇಲ್ಲಿ ಕೆಲವರಿಗೊಂದು ಅನುಮಾನ ಬರಬಹುದು. ಅದೇನೆಂದರೆ "ಎಲ್ಲವನ್ನು ಸೃಷ್ಟಿಸಿದವನಿಗೆ ಹೆಸರು, ಆಕಾರ ಇಲ್ಲದಿರುವಾಗ, ಆತನನ್ನು ದೇವರು ಎನ್ನುತ್ತಿದ್ದೇವೆ. ಅದು ಒಂದು ಹೆಸರು ಅಲ್ಲವೆ" ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ದೇವರು ಎನ್ನುವ ಪದ ಒಂದು ಹೆಸರಲ್ಲ. ಅದು ಒಂದು ಅರ್ಥವಿಧಾನವನ್ನು ತಿಳಿಸುವ ಪದ. ಹುಡಿಕಿದರು ಕಾಣಿಸದವನೆಂಬ ಅರ್ಥವನ್ನು ಸೂಚಿಸುವ ಪದವನ್ನು ದೇವರು ಎನ್ನುತ್ತೇವೆ. ಒಂದು ಕಣ್ಣಿನಿಂದ ನೋಡಿದರೆ ಕಾಣಿಸದವನೆಂಬುವುದಲ್ಲದೆ, ಹುಡುಕುವ ವಿಧಾನಗಳೆಷ್ಟು ಇದ್ದರೂ ಅವುಗಳಿಗೆ ತಿಳಿಯದವನೆಂದು ಅರ್ಥ. ಹುಡುಕುವುದು ಕಣ್ಣಿನಿಂದಲೇ ಅಲ್ಲ, ಕಣ್ಣಿಲ್ಲದವನು ಕೈ ಸ್ಪರ್ಶದಿಂದಲು ಕೂಡಾ ಹುಡುಕುತ್ತಾನೆ.

ಹಾಗೆ ಕಿವಿಯ ಶ್ರವಣಶಕ್ತಿಯಿಂದಲೂ ಸಹ ಹುಡುಕುವುದು ಇದೆ. ಬಾಯಿ ನಾಲಿಗೆಯಿಂದ ಕೂಡ ನೋಡುವುದು ಇದೆ. ನಾಲಿಗೆಗೆ ಕಣ್ಣುಗಳೇ ಇಲ್ಲ! ನೋಡುವುದೇನೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಒಂದು ಪದಾರ್ಥವನ್ನು ರುಚಿ ನೋಡಿ ಹೇಳುವುದರಲ್ಲಿ ಆ ಪದಾರ್ಥದಲ್ಲಿ ನಾಲಿಗೆ ಕೂಡ ರುಚಿ ಎನ್ನುವುದನ್ನು ಹುಡುಕಿ ನೋಡುತ್ತಿದೆ ಯೆಂದು ತಿಳಿಯುತ್ತಿದೆ. ಈ ವಿಧವಾಗಿ ವಿಶ್ವದಲ್ಲಿ ಏನನ್ನಾದರೂ ಐದು ಇಂದ್ರಿಯಗಳ ಮೂಲಕ ಹುಡುಕುತ್ತಿದ್ದೇವೆ. ಮನುಷ್ಯ ಹುಡುಕುವ ಐದು ವಿಧಾನಗಳಿಗು ತಿಳಿಯದವನೇ ದೇವರು. ಐದು ಇಂದ್ರಿಯಗಳಿಗೆ ಅತೀತನು ದೇವರು. ಆತನನ್ನೇ ಇಂದ್ರಿಯಾತೀತನೆಂದೂ ಸಹ ಕರೆಯುತ್ತಿದ್ದೇವೆ.

ತಿಳಿಯದಿರುವುದನ್ನು ಹುಡುಕುವುದು ಒಂದು ವಿಧಾನ. ದೇವರು ತಿಳಿಯದವನು ಆದ್ದರಿಂದ ಹುಡುಕುವುದೆನ್ನುವ ವಿಧಾನದಿಂದ ಇದ್ದಾನೆ. ಹುಡುಕುವುದು ಎನ್ನುವ ಪದ ಕೆಲವು ಪ್ರಾಂತಗಳಲ್ಲಿ ದೇವುಲಾಡುವುದು (ಹುಡುಕುವುದು) ಎಂದು ಸಹ ಹೇಳುತ್ತಿದ್ದೇವೆ. ಹುಡುಕುವುದರಲ್ಲಿ ಅಥವಾ ದೇವುಲಾಡುವುದರಲ್ಲಿ ಆಡುವುದು ಎನ್ನುವುದನ್ನು ತೆಗೆದುಹಾಕಿದರೆ **"ಹುಡುಕು"** ಎನ್ನುವ ಪದಕ್ಕೆ ಸಮಾನವಾದ ಪದ **"ದೇವು"** ಎನ್ನುವುದು. ದೇವು ಎನ್ನುವ ಪದದಿಂದ ಬಂದಿರುವುದೇ **"ದೇವರು"** ದೇವರು ಎಂದರೆ ತಿಳಿಯದವನೆಂದು, ತಿಳಿಯದಹಾಗೆ ಇರುವವನೆಂದು, ಎಂದಿಗೂ ಹುಡುಕಲ್ಪಡುವವನೇ ಹೊರತು ತಿಳಿಯುವವನು ಅಲ್ಲವೆಂದು ಅರ್ಥವಾಗುತ್ತಿದೆ. ಈ ವಿಧವಾಗಿ "ದೇವರು" ಎನ್ನುವ ಪದ ಪ್ರತ್ಯೇಕತೆ ಹೊಂದಿದೆ. ತಿಳಿಯಲ್ಪಡದ ದೇವರನ್ನು ತಿಳಿದುಕೊಳ್ಳುವು ದಕ್ಕೆ ಭೂಮಿಮೇಲೆ ಕೆಲವರು ಒಂದು ವಿಧಾನವನ್ನು ಅವಲಂಭಿಸಿ ದಾಗ ಮತ್ತೆ ಕೆಲವರು ಮತ್ತೊಂದು ವಿಧಾನವನ್ನು ಅವಲಂಭಿ ಸುತ್ತಿದ್ದಾರೆ. ಅವರವರ ಇಷ್ಟಾನುಸಾರ ಅವಲಂಭಿಸಿದ ವಿಧಾನವನ್ನೇ ಮತಗಳು ಎನ್ನುತ್ತಿದ್ದೇವೆ. ದೇವರನ್ನು ಹುಡುಕುವ ವಿಧಾನವೇ ಮತವಾಗಲಿ, ಮತವು ದೇವರಲ್ಲ. ಮತದಲ್ಲಿ ದೇವರನ್ನು ಹುಡುಕುವ ವಿಧಾನವಿದೆ, ಆದ್ದರಿಂದ ಮತದಲ್ಲಿ ದೈವ ಜ್ಞಾನವಿರಬಹುದು.

ಆದರೆ ದೈವವಿರುವುದಿಲ್ಲ. ಎಲ್ಲಾ ಮತಗಳಿಗೆ ಸಮಾನವಾದ ದೂರದಲ್ಲಿಯೇ ದೇವರು ಇದ್ದಾನೆ. ಒಂದು ಮತಕ್ಕೆ ಹತ್ತಿರ ಎಂದಾಗಲಿ, ಮತ್ತೊಂದು ಮತಕ್ಕೆ ದೂರವೆಂದಾಗಲಿ ದೇವರು ಇಲ್ಲ. ತಿಳಿದುಕೊಳ್ಳುವವನಿಗೆ ತಿಳಿದುಕೊಳ್ಳುವಷ್ಟು ತಿಳಿಯುತ್ತದೆ, ಆದರೆ ಪೂರ್ತಿ ಯಾರಿಗೂ ತಿಳಿಯುವುದಿಲ್ಲ. ಆದ್ದರಿಂದಲೇ ಭೂಮಿಮೇಲೆ ಬದುಕಿರುವವರಿಗ್ಯಾರಿಗೂ ತಿಳಿಯದವನು ದೇವರು ಎಂದಿದ್ದೇವೆ. ಇಲ್ಲಿಯವರೆಗೂ ದೇವರನ್ನು ನೋಡಿದವನು ಭೂಮಿಮೇಲೆ ಯಾರೂ ಇಲ್ಲ.

ಸೃಷ್ಟಿಸಲ್ಪಟ್ಟಿರುವವು ಎಷ್ಟಾದರೂ ಅವುಗಳನ್ನು ಸೃಷ್ಟಿಸಿದ ಸೃಷ್ಟಿಕರ್ತ ಒಬ್ಬನೇ. ಆ ಒಬ್ಬನನ್ನು ದೇವರೆನ್ನುವ ಒಂದು ಪದದಿಂದಲೇ ಕರೆಯಬೇಕಾ ಅಥವಾ ದೇವರ ಬೆಲೆಯನ್ನು, ಅರ್ಥವನ್ನು ಭಂಗಪಡಿಸದೆ, ಅದೇ ಬೆಲೆ ಇರುವ ಮತ್ತೆ ಕೆಲವು ಪದಗಳಿಂದ ಕರೆಯಬಹುದಾ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವಾಗಿ, ದೇವರ ಗೌರವಕ್ಕೆ ಹಾನಿ ಉಂಟಾಗದಂತೆ ರೂಪ, ನಾಮ, ಕ್ರಿಯೆಗಳಿಗೆ ಅತೀತವಾಗಿ ಯಾವ ಪದವನ್ನು ಉಪಯೋಗಿ ಸಿಯಾದರೂ ಕರೆಯಬಹುದೆನ್ನುತ್ತಿದ್ದೇವೆ.

ಪ್ರಪಂಚದಲ್ಲಿ ಜಡಪದಾರ್ಥಗಳಿಗಿಂತ ಚೈತನ್ಯ ಹೊಂದಿರುವ ಸಜೀವ ಸ್ವರೂಪಗಳು ದೊಡ್ಡವು, ಕದಲಿಕೆಯಿಲ್ಲದ ನಿರ್ಜೀವಗಳಿಗಿಂತ ಚೈತನ್ಯವಾದವು ಶರೀರಗಳಲ್ಲಿ ಎರಡು ಇವೆ. ಆ ಎರಡನ್ನು ಆತ್ಮ, ಜೀವಾತ್ಮ, ಎನ್ನುತ್ತಿದ್ದೇವೆ. ಆತ್ಮ ಜೀವಾತ್ಮವಾಗದವುಗಳನ್ನು ಪ್ರಕೃತಿ ಎನ್ನುತ್ತಿದ್ದೇವೆ. ಪ್ರಕೃತಿ ಐದು ಭಾಗಗಳಾಗಿದೆ. ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಭಾಗಗಳನ್ನು ಪ್ರಕೃತಿ ಎನ್ನುತ್ತಿದ್ದೇವೆ. ಪ್ರಕೃತಿ ಅಲ್ಲದಂತಹವುಗಳನ್ನು ಆತ್ಮ ಜೀವಾತ್ಮ ಎನ್ನುತ್ತಿದ್ದೇವೆ. ವಿಶ್ವದಲ್ಲಿ ಪ್ರಕೃತಿ ಮತ್ತು ಆತ್ಮ, ಜೀವಾತ್ಮಗಳು ಎನ್ನುವ ಮೂರೂ ದೇವರಲ್ಲ. ಪ್ರಕೃತಿಗಿಂತ ಆತ್ಮ, ಜೀವಾತ್ಮಗಳು, ದೊಡ್ಡವಾಗಿದ್ದು, ಆತ್ಮ ಜೀವಾತ್ಮಗಳಿಗಿಂತ ಆತ್ಮ ದೊಡ್ಡದು. ಶರೀರದಲ್ಲಿ ಶ್ರೇಷ್ಠವಾದ ಆತ್ಮಗಿಂತ ದೇವರು ದೊಡ್ಡವನಾಗಿರುತ್ತಾ, ಆತ್ಮಗಿಂತ ಬೇರೆಯಾಗಿ ಕೂಡಾ ಇದ್ದಾನೆ. ಆತ್ಮಗಿಂತ ಪರಾಯಿಯಾಗಿ ಬೇರೆಯಾಗಿದ್ದಾನೆ ಆದ್ದರಿಂದ ಮೂರನೇ ಆತ್ಮವನ್ನು ಪರಮಾತ್ಮ

ಎನ್ನುತ್ತಿದ್ದೇವೆ. ಪರಮಾತ್ಮ ಎನ್ನುವ ಪದ ಆತ್ಮ ಕೂಡ ಅಲ್ಲವೆಂದು, ಆತ್ಮಗಿಂತ ಭಿನ್ನವಾಗಿ, ಬೇರೆಯಾಗಿ ಇದೆಯೆನ್ನುವ ಭಾವವಿರುವುದೇ ಹೊರತು ಅದು ಹೆಸರಲ್ಲ. ವಾಸ್ತವಕ್ಕೆ ದೇವರು ಜಡವಾದ ಒಂದು ಪದಾರ್ಥವಲ್ಲ, ಚೈತನ್ಯವಾದ ಆತ್ಮವಲ್ಲ. ಅದೇ ರೀತಿಯಾಗಿ ಭೌತಿಕವಾದ ಸ್ತ್ರೀಯಲ್ಲ ಮತ್ತು ಪುರುಷನು ಅಲ್ಲ. ಆದ್ದರಿಂದ ದೇವರನ್ನು ಸ್ತ್ರೀಲಿಂಗವಾಗಿ ಪರಮಾತ್ಮ ಯಾವುದು ಅಲ್ಲದಿರುವುದೆಂದು, ಪುಲಿಂಗವಾಗಿ ಎರಡು ವಿಧಗಳಾಗಿ ಹೇಳಿಕೊಳ್ಳುತ್ತಿದ್ದೇವೆ.

ದೇವರು ಎನ್ನುವ ಪದಕ್ಕೆ ವಿಭಿನ್ನ ಅಲ್ಲದಿರುವುದು ಪರಮಾತ್ಮ ಪದ. ಹಾಗೆಯೇ ದೇವರ ವಿಧಾನವನ್ನು ತಿಳಿಸುವ ಪದಗಳನ್ನುಪಯೋಗಿಸಿಕೊಂಡು ಯಾವ ವಿಧವಾಗಿಯಾದರೂ ಕರೆಯಬಹುದು. ಉದಾಹರಣೆಗೆ ಜಗತ್‌ಭರ್ತ (ಪತಿ) ಎನ್ನುತ್ತಿದ್ದೇವೆ. ಭರ್ತ (ಪತಿ) ಎಂದರೆ ಭರಿಸುವವನು, ಪತ್ನಿ ಎಂದರೆ ಭರಿಸಲ್ಪಡುವವಳು ಎಂದು ಅರ್ಥ. ಜಗತ್ತು ಎಲ್ಲವನ್ನು ಭರಿಸುವವನು ಪರಮಾತ್ಮ, ಆದ್ದರಿಂದ ದೇವರನ್ನು ಜಗತ್‌ಭರ್ತ ಎನ್ನುತ್ತಿದ್ದೇವೆ. ಆದರೆ ಅದು ಹೆಸರಲ್ಲ. ಹಾಗೆಯೇ ಪುರುಷೋತ್ತಮ ಎನ್ನುವುದು ಕೂಡ ಹೆಸರಲ್ಲ. ಆತ್ಮ ಜೀವಾತ್ಮಗಳನ್ನು ಪುರುಷರಿಗಿಂತ ಉತ್ತಮ ಪುರುಷನೆಂಬ ಅರ್ಥ ಹೊರತು ಹೆಸರಲ್ಲ. ದೇವರ ಘನತೆಗೆ ಹಾನಿ ಇಲ್ಲದ ಪದಗಳನ್ನು ಎಷ್ಟಾದರೂ ಉಪಯೋಗಿಸಿಕೊಳ್ಳಬಹುದು. ಅಂತಹ ಪದಗಳಲ್ಲಿ ಮುಖ್ಯವಾದುದು ಒಂದು ಪದವಿದೆ. ಅದುವೇ "ಪ್ರಭು" ಪ್ರಭುವಿನಲ್ಲಿ ಬಹಳ ವಿಶೇಷವಾದ ಅರ್ಥ ಒಳಗೊಂಡಿದೆ. ಪ್ರಭು ಎನ್ನುವ ಪದವನ್ನು ಉಚ್ಚರಿಸುವುದರಲ್ಲಿ "ಪ್ರಭು" ಎಂದು ಕರೆಯಬಹುದು. ಪ್ರಭುವಿಗೆ ಅರ್ಥವೇನೆಂದರೆ! "ಭು" ಎಂದರೆ ಹುಟ್ಟುವುದು ಎಂದು ಹೇಳಬಹುದು. "ಸ್ವಯಂಭು" ಎಂದರೆ ಇತರರ ಜೋಕ್ಯ ಇಲ್ಲದೆ ಸ್ವತಃವಾಗಿ ಹುಟ್ಟಿದವನೆಂದು ಅರ್ಥ. ತನ್ನ ಇಷ್ಟಪ್ರಕಾರ ತನಗೆ ತಾನಾಗಿ ಹುಟ್ಟುವವನನ್ನು ಸ್ವಯಂಭು ಎಂದು ಕರೆಯುತ್ತಿದ್ದೇವೆ. ಸ್ವಯಂಭು ಎಂದು ಯಾರನ್ನು ಕರೆಯಬಹುದೆಂದರೆ! ದೇವರು ಹೊರತು ಸ್ವತಃವಾಗಿ ಹುಟ್ಟಿದವರು ಯಾರೂ ಇಲ್ಲ. ಆದ್ದರಿಂದ ಸ್ವಯಂಭು ಎಂದು ದೇವರನ್ನೇ ಹೇಳಬಹುದು. ದೇವರು ಸ್ವತಃವಾಗಿ ಏಕೆ ಹುಟ್ಟುತ್ತಿದ್ದಾನೆಂದು

ಯಾರಾದರೂ ಕೇಳಿದರೆ ಅದಕ್ಕೆ ಉತ್ತರ ಹೇಳುವುದಕ್ಕೆ, ಮೊದಲು ಸ್ವಲ್ಪ ವಿಷಯ ತಿಳಿಯಬೇಕಾಗಿದೆ. ಆ ವಿಷಯವೇನೆಂದರೆ!

ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಶಾಸನವಿದೆ. ಅಂತಹವನು ಹುಟ್ಟಿದರೇ ಆತನಿಗೆ ಅದು ಒಂದು ಕೆಲಸ ಆಗುತ್ತದೆ ಅಲ್ಲವೆ! ಶಾಸ್ತ್ರಬದ್ಧವಾಗಿ ದೇವರಿಗೆ ಕೆಲಸವೇ (ಕ್ರಿಯೆಯೇ) ಇಲ್ಲದಿರುವಾಗ ಆತನು ಹುಟ್ಟುವುದೂ, ಸ್ವತಃವಾಗಿ ಹುಟ್ಟುವುದೂ, ಸ್ವಯಂಭು ಎನಿಸಿಕೊಳ್ಳುವುದು ಸತ್ಯವಾ ಎಂದು ಯಾರಿಗಾದರೂ ಪ್ರಶ್ನೆ ಬರಬಹುದು. ಅದಕ್ಕೆ ಉತ್ತರವನ್ನು ವಿವರವಾಗಿ ತಿಳಿದುಕೊಂಡರೆ ದೇವರು ಹುಟ್ಟುವವನೂ ಅಲ್ಲ ಮತ್ತು ಗಿಟ್ಟುವವನೂ ಅಲ್ಲ. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ ಆರನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾರೆ.

**ಶ್ಲೋ॥ ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿ ಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾ ಮ್ಯಾತ್ಮ ಮಾಯಯಾ॥**

ಈ ಶ್ಲೋಕದಲ್ಲಿ "ಅಜೋಽಪಿ" ಎನ್ನುವ ಪದದ ಅರ್ಥ ಜನ್ಮ ಇಲ್ಲದವನೆಂದು, ಹಾಗೆಯೇ "ನ್ನವ್ಯಯಾತ್ಮಾ" ಎನ್ನುವ ಪದ ನಾಶವಿಲ್ಲದವನೆಂದು ಅರ್ಥ ಕೊಡುತ್ತಿದೆ. ಇದನ್ನನುಸರಿಸಿ ದೇವರಿಗೆ ಜನನವಾಗಲಿ, ಹಾಗೆ ನಾಶವಾಗಲಿ ಎರಡೂ ಇಲ್ಲವೆಂದು ಹೇಳಬಹುದು. ಈ ವಾಕ್ಯವನ್ನು ಅನುಸರಿಸಿ ದೇವರು ಹುಟ್ಟುವುದಿಲ್ಲ ಎಂದು ಹೇಳಬಹುದು. ದೇವರು ಹುಟ್ಟುವುದಿಲ್ಲ ಎನ್ನುವ ವಾದನೆ ಪ್ರಸ್ತುತ ಕಾಲದಲ್ಲಿ ಇಸ್ಲಾಮ್ ಸಮಾಜದಲ್ಲಾಗಲಿ, ಕ್ರೈಸ್ತವ ಸಮಾಜದಲ್ಲಾಗಲಿ ಗಟ್ಟಿಯಾಗಿ ಹೇಳಲ್ಪಡುತ್ತಿದೆ. ದೇವರು ಹುಟ್ಟುವುದಿಲ್ಲ ಎನ್ನುವಮಾತು ವಾಸ್ತವವೇ ಆದರೂ ಅದೇ ಶ್ಲೋಕದಲ್ಲಿ ನಾನು ಹುಟ್ಟುತ್ತೇನೆ ಎನ್ನುವ ಅರ್ಥದಿಂದ "ಸಮ್ಭವಾ" ಎಂದು ಹೇಳುವುದು ನಡೆದಿದೆ. ಅಲ್ಲಿಯೇ ಏಳನೇ (7) ಶ್ಲೋಕದಲ್ಲಿ "ಸೃಜಾಮ್ಯಹಮ್" ಎನ್ನುವ ಪದವನ್ನು ಬಳಸಿ ನನ್ನನ್ನು ನಾನು ಹುಟ್ಟಿಸಿಕೊಳ್ಳುತ್ತೇನೆ ಎಂದಿದ್ದಾನೆ. ನಂತರ ಎಂಟನೇ (8) ಶ್ಲೋಕದಲ್ಲಿ "ಸಮ್ಭವಾಮಿ ಯುಗೇ ಯುಗೇ" "ಕೆಲವು ಯುಗಗಳಿಗೊಂದುಸಲವಾದರೂ ನಾನು ಹುಟ್ಟುತ್ತೇನೆ"

ಎಂದು ಹೇಳಿದ್ದಾನೆ. ಇಲ್ಲಿ ಪ್ರತಿಯೊಬ್ಬರೂ ಚೆನ್ನಾಗಿ ಗ್ರಹಿಸಬೇಕಾಗಿರುವುದು ಏನೆಂದರೆ! ಆರನೇ ಶ್ಲೋಕದಲ್ಲಿ **"ಅಜುಡನು"** ಹುಟ್ಟುವವನು ಅಲ್ಲ ಎಂದ ದೇವರು, ಅದೇ ಶ್ಲೋಕದಲ್ಲಿ **"ಸಂಭವಾ"** ಹುಟ್ಟುತ್ತೇನೆ ಎಂದು ಹೇಳಿದ್ದಾನೆ. ನಂತರ ಎಂಟನೇ ಶ್ಲೋಕದಲ್ಲಿ ಕೂಡಾ ಸಮ್ಭವಾಮಿ ಎಂದು ಹುಟ್ಟುತ್ತೇನೆಂದೇ ಹೇಳಿದ್ದಾನೆ. ಏಳನೇ ಶ್ಲೋಕದಲ್ಲಿ ಮಾತ್ರ **"ಸೃಜಾಮ್ಯಹಮ್"** ನನ್ನನ್ನು ನಾನು ಹುಟ್ಟಿಸಿಕೊಳ್ಳುತ್ತೇನೆ ಎಂದು ಹೇಳಿದ್ದಾನೆ. ಆ ವಿಧವಾಗಿಯಾದರೂ ದೇವರು ಹುಟ್ಟಿದಂತೆ ಆಗುತ್ತಾನೆ. ಈ ವಿಧವಾಗಿ ಎರಡು ವಿಧಗಳಾಗಿ ಹೇಳುವುದರಿಂದ ಮನುಷ್ಯರು ಅರ್ಥಮಾಡಿಕೊಳ್ಳದೆ ಕೆಲವರು ಹುಟ್ಟುವುದಿಲ್ಲವೆಂದು, ಕೆಲವರು ಹುಟ್ಟುತ್ತಾನೆಂದು ಹೇಳುವುದು ನಡೆಯುತ್ತಿದೆ. ಎರಡು ಮಾತುಗಳೂ ಶಾಸ್ತ್ರಬದ್ಧವಾದವೇ, ಎರಡು ಮಾತುಗಳು ವಾಸ್ತವವಾಗಿ ದೈವ ವಾಕ್ಕುಗಳೇ, ಆದರೆ ಈ ವಿಷಯವನ್ನು ಮನುಷ್ಯ ಹೇಗೆ ಅರ್ಥ ಮಾಡಿಕೊಳ್ಳಬೇಕೊ ತಿಳಿಯದಂತೆ ಹೋಗಿದೆ. ಒಟ್ಟಾರೆ ದೇವರು ಹುಟ್ಟುತ್ತಾನಾ, ಹುಟ್ಟುವುದಿಲ್ಲವಾ ಎನ್ನುವ ಪ್ರಶ್ನೆಯನ್ನು ಹಾಕಿಕೊಂಡ ನೋಡಿದರೆ ಈಗ ಹೇಳಿದ 6,7,8 ಶ್ಲೋಕಗಳಿಗಿಂತ ಮೊದಲು ಐದನೇ (5) ಶ್ಲೋಕದಲ್ಲಿ **"ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನಾ"** ಎಂದು ಹೇಳಿದ್ದಾನೆ. ಆ ಮಾತಿಗೆ ನಾನು ಎಷ್ಟೋಸಲ ಹುಟ್ಟಿದ್ದೇನೆ, ನೀನು ಕೂಡಾ ಎಷ್ಟೋ ಸಲ ಹುಟ್ಟಿದ್ದೀಯಾ ಎಂದು ಅರ್ಥ. ಇದನ್ನನುಸರಿಸಿ ದೇವರು ಹುಟ್ಟಿತ್ತಿದ್ದಾನೆಂದು ತಿಳಿದರೂ ತಕ್ಷಣ ಮತ್ತೊಂದು ಪ್ರಶ್ನೆ ಬರುತ್ತದೆ. ಈಗ ಹೇಳಿರುವುದು ಭಗವಂತನು, ದೇವರು ಅಲ್ಲ! ಭಗವಂತನು ಹುಟ್ಟುತ್ತಾನೇನೊ ಆದರೆ, ದೇವರು ಹುಟ್ಟುವುದಿಲ್ಲ ಅಲ್ಲವೆ! ಎಂದು ಸಂಶಯ ಬರಬಹುದು. ಆದರೆ ತಕ್ಷಣ ಉತ್ತರ ಕೂಡಾ ಈ ವಿಧವಾಗಿ ಬರುತ್ತಿದೆ. ಆರನೇ (6) ಶ್ಲೋಕದಲ್ಲಿ ಹೇಳಿದವನು ಭಗವಂತನೇ. ಆಗ **ಅಜೋಽಪಿ** = ಹುಟ್ಟುವವನು ಅಲ್ಲವೆಂದು ಹೇಳುವುದಲ್ಲದೆ, **ಭೂತಾನಾ ಮೀಶ್ವರೋಽಪಿ** = ಜೀವರಾಶಿಗಳಿಗೆ ದೇವರು ಎಂದು ಕೂಡಾ ಹೇಳಿದ್ದಾನೆ. ಈ ಮಾತುಗಳನ್ನು ಅನುಸರಿಸಿ ಹೇಳಿದವನು ದೇವರೇ ಎಂದು ತಿಳಿಯುತ್ತಿದೆ. ಆದರೆ ದೇವರಿಗೆ ರೂಪ, ನಾಮ, ಕ್ರಿಯೆಗಳು ಇಲ್ಲದಿರುವಾಗ ಹೇಗೆ ಹುಟ್ಟುತ್ತಾನೆ? ಹೇಗೆ

ಕಾಣಿಸುತ್ತಾನೆ? ಹೇಗೆ ಕೆಲಸ ಮಾಡುತ್ತಾನೆ? ಎನ್ನುವ ಪ್ರಶ್ನೆಗಳು ಬರುತ್ತವೆ. ಈ ವಿಧವಾಗಿ ದೇವರ ವಿಷಯದಲ್ಲಿ ಒಂದು ಪ್ರಶ್ನೆಗೆ ಉತ್ತರವಿದ್ದರೂ, ಮತ್ತೊಂದು ಪ್ರಶ್ನೆ ಬರುತ್ತಿರುತ್ತದೆ.

ದೇವರ ವಿಷಯದಲ್ಲಿ ಸಂಪೂರ್ಣ ಜ್ಞಾನ ಉಂಟಾಗುವವರೆಗು ಯಾವಕಡೆ ನಿರ್ಣಯಿಸಲಾರದ ಸ್ಥಿತಿ ಮಾನವರಲ್ಲಿ ಇರುತ್ತದೆ. ಆದ್ದರಿಂದ ಕೆಲವರು ದೇವರು ಹುಟ್ಟುವುದಿಲ್ಲ ಎಂದರೆ, ಕೆಲವರು ಮಾತ್ರ ದೇವರು ಹುಟ್ಟುತ್ತಾನೆಂದು ಹೇಳುತ್ತಿರುತ್ತಾರೆ. ಅಸಲಾದ ಸಂಪೂರ್ಣವಾದ ದೈವಜ್ಞಾನ ತಿಳಿಯದವರೆಗು ಯಾವುದನ್ನು ಒಪ್ಪಿಕೊಳ್ಳುವುದಕ್ಕೆ ಸಾಧ್ಯಪಡುವುದಿಲ್ಲ. ದೇವರಿಗೆ ಸಂಬಂಧಿಸಿದ ಸಮಸ್ತ ಜ್ಞಾನವನ್ನು ತಿಳಿದ ದಿನ, ದೇವರು ಹುಟ್ಟುತ್ತಾನೆ ಎನ್ನುವ ಮಾತೂ ಸಹ ನಿಜವೇ ಆಗುತ್ತದೆ. ಹಾಗೆಯೇ ಹುಟ್ಟುವುದಿಲ್ಲ ಎನ್ನುವ ಮಾತನ್ನು ಕೂಡಾ ನಿಜವೇ ಆಗುತ್ತದೆ. ಇದೇನು ವಿಡ್ಡೂರ ಎರಡು ಮಾತುಗಳು ಹೇಗೆ ನಿಜವಾಗುತ್ತವೆಂದು ಪ್ರಶ್ನೆಬಂದರೆ ಅದಕ್ಕೆ ಉತ್ತರ ಈ ರೀತಿಯಾಗಿ ಇದೆ.

ಭೂಮಂಡಲವೆಲ್ಲವೂ ಅಖಂಡವಾಗಿ ಸಮುದ್ರ ವ್ಯಾಪಿಸಿದೆಯೆಂದು ಎಲ್ಲರಿಗೂ ತಿಳಿದಿದೆ. ಸಮುದ್ರದಲ್ಲಿ ನೀರಿದೆಯೆಂದು ಕೂಡಾ ತಿಳಿದಿದೆ. ಸಮುದ್ರ ಇರುವುದೊಂದೇ ಆದರೂ ಪ್ರಾಂತೀಯವಾಗಿ ಅದನ್ನೇ ಕೆಲವು ಹೆಸರುಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಒಂದೇ ಸಮುದ್ರಕ್ಕೆ ಐದು ಹೆಸರುಗಳನ್ನು ಇಟ್ಟು ಐದು ಮಹಾ ಸಮುದ್ರಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಹೆಸರುಗಳು ಬೇರೆಬೇರೆಯಾಗಿ ಇದ್ದರೂ ಹೆಸರು ಕೊನೆಯಲ್ಲಿ ಸಮುದ್ರವೆಂದೇ ಹೇಳಲ್ಪಡುತ್ತಿದೆ. ಇರುವುದು ಒಂದೇ ಸಮುದ್ರವಾದರೂ, ಅದು ಎಷ್ಟು ಹೆಸರುಗಳಿಂದ ಕರೆಯಲ್ಪಟ್ಟರೂ, ಸಮುದ್ರದಲ್ಲಿರುವುದು ಮಾತ್ರ ಉಪ್ಪು ನೀರೆ. ನೀರಿಗೆ ಮುಖ್ಯವಾದ ಧರ್ಮವೊಂದು ಇದೆ. ಧರ್ಮ ಎಂದರೆ ಎಂದಿಗೂ ಬದಲಾಗದಿರುವುದು, ಶಾಶ್ವತವಾದುದು, ಸಹಜವಾಗಿ ಇರುವುದೆಂದು ಅರ್ಥ. ನೀರಿಗೆ ಎಂದಿಗೂ ಅಂಟಿಕೊಂಡಿರುವ ಧರ್ಮವನ್ನು ಪರಿಶೀಲಿಸಿದರೆ, ಅದರ ಧರ್ಮದ ಪ್ರಕಾರ ಕಾಣಿಸದ ಎರಡು ವಾಯುಗಳ ಸೇರುವಿಕೆಯೇ ನೀರು ಎಂದು ತಿಳಿಯುತ್ತಿದೆ. ಒಂದು ಆಕ್ಸಿಜನ್

ವಾಯು, ಎರಡನೆಯದು ಹೈಡ್ರೋಜನ್ ವಾಯುವಾಗಿ ಗುರುತಿಸಲಾಗಿದೆ. ಅದೂ ಆಕ್ಸಿಜನ್ ವಾಯು ಶೇ. ಒಂದರಷ್ಟು, ಹೈಡ್ರೋಜನ್ ವಾಯು ಶೇ. ಎರಡರಷ್ಟು ಬೆರತಿರುವುದರಿಂದ ನೀರು ಏರ್ಪಟ್ಟಿದೆಯೆಂದು ತಿಳಿಯುತ್ತಿದೆ. ನೀರು ಎಲ್ಲಿ ಇದ್ದರೂ ಅದು ಆಕ್ಸಿಜನ್ ಮತ್ತು ಹೈಡ್ರೋಜನ್ ಎನ್ನುವ ಎರಡು ವಾಯುಗಳ ಸಮ್ಮೇಳನವೆಂದು ತಿಳಿಯುತ್ತಿದೆ. ಪ್ರಾಂತ್ಯಗಳನ್ನನುಸರಿಸಿ ಎಷ್ಟೋ ಹೆಸರುಗಳಾಗಿ ಹೇಳಲ್ಪಡುತ್ತಿರುವ ಸಮುದ್ರ ಭೂಮಂಡಲವೆಲ್ಲವೂ ವ್ಯಾಪಿಸಿದೆ. ಸಮುದ್ರದಲ್ಲಿನ ನೀರನ್ನು ಮೇಘಗಳು ತೆಗೆದುಕೊಂಡು ಹೋಗಿ ಭೂಮಿಮೇಲೆ ಎಲ್ಲಾ ಪ್ರಾಂತ್ಯಗಳಲ್ಲಿ ಮಳೆ ಸುರಿಸುತ್ತಿವೆ. ಭೂಮಿ ಮೇಲೆ ಮಳೆಯಿಂದ ಬಂದ ನೀರು ಮಾನವರಿಗೆ ಮತ್ತು ಎಲ್ಲಾ ಜೀವರಾಶಿಗಳಿಗೆ ಉಪಯೋಗ ಪಡುತ್ತಿದೆ. ಹಾಗೆ ಸ್ವಲ್ಪ ಉಪಯೋಗಪಡುತ್ತಿರುವಾಗ ಉಳಿದ ನೀರು ನದಿಗಳ ಮೂಲಕ ಸಮುದ್ರವನ್ನೇ ಸೇರುತ್ತಿವೆ. ಸಮುದ್ರವನ್ನು ಸೇರದವರೆಗು ಮನುಷ್ಯನಿಗೆ ಉಪಯೋಗಪಡುವ ನೀರು ಒಳ್ಳೆಯನೀರಾಗಿರುವ ನೀರು, ಸಮುದ್ರವನ್ನು ಸೇರಿದ ನಂತರ ಯಾರಿಗೂ ಉಪಯೋಗಪಡದ ಉಪ್ಪು ನೀರಾಗಿ ಬದಲಾಗಿ ಹೋಗುತ್ತದೆ. ಇದು ಎಲ್ಲರಿಗೂ ತಿಳಿದ ವಿಷಯವೇ.

ಇಲ್ಲಿ ನಮಗೆ ನೀರಿಗಿರುವ ಧರ್ಮ ತಿಳಿದಿದೆ. ಒಂದು ಭಾಗ ಆಕ್ಸಿಜನ್ ವಾಯುವು, ಎರಡು ಭಾಗಗಳು ಹೈಡ್ರೋಜನ್ ವಾಯುವಿನ ಸೇರುವಿಕೆಯೇ ನೀರೆಂದು ತಿಳಿದಿದೆ. ಈ ಸೂತ್ರ ಬದಲಾಗುವುದಲ್ಲ, ಶಾಶ್ವತವಾಗಿ ಇರುವುದು. ಆದ್ದರಿಂದ ನೀರಿಗೆ ಒಂದು ಧರ್ಮ ಇದೆಯೆಂದು ಹೇಳಬಹುದು. ನೀರಿಗೆ ಒಂದು ಧರ್ಮ ಇರುವಂತೆ ದೇವರಿಗೂ ಕೂಡಾ ಮುಖ್ಯವಾದ ಧರ್ಮ ಒಂದು ಇದೆ. ಅದೇನೆಂದರೆ ದೇವರು ರೂಪ, ನಾಮ, ಕ್ರಿಯಾ ರಹಿತನು ಎನ್ನುವುದೇ ಆತನ ಧರ್ಮ. ದೇವರ ಧರ್ಮದ ಪ್ರಕಾರ ದೇವರಿಗೆ ಆಕಾರ ಇಲ್ಲ, ಹೆಸರೂ ಇಲ್ಲ, ಕೆಲಸವು ಇಲ್ಲವೆಂದು ಹೇಳಬಹುದು. ದೇವರಿಗೆ ರೂಪ, ಹೆಸರೂ, ಕೆಲಸ ಇಲ್ಲವೆನ್ನುವುದು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿನ ಶಾಸನ ಮತ್ತು ಧರ್ಮ. ದೇವರು ರೂಪ, ನಾಮ, ಕ್ರಿಯಾ ರಹಿತನು ಎನ್ನುವುದು ಶಾಸನ, ಆದ್ದರಿಂದ ಈ ಶಾಸನವನ್ನು ಅನುಸರಿಸಿ ದೇವರು ಹುಟ್ಟುವುದಿಲ್ಲ ಎಂದು

ಹೇಳಬಹುದು. ದೇವರಿಗೆ ಜನ್ಮವಿಲ್ಲ ಎನ್ನುವುದು ಶಾಸ್ತ್ರಬದ್ಧವೆಂದು ಕೂಡಾ ಹೇಳಬಹುದು. ಆದ್ದರಿಂದಲೇ ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆಯಲ್ಲಿ **"ಅಜೋಪಿ"** ಜನ್ಮ ಇಲ್ಲದವನೆಂದು ಹೇಳಲಾಗಿದೆ. ಇದನ್ನನುಸರಿಸಿ ದೇವರು ಹುಟ್ಟುವುದಿಲ್ಲ ಎಂದು ಇಸ್ಲಾಮ್‌ವರ್ಗದವರು ಹೇಳುವ ಮಾತು ಪೂರ್ತಿ ಸತ್ಯವಾದುದೇ. ಇಲ್ಲಿ ಇನ್ನೊಂದು ವಿಷಯವನ್ನು ಮಾನವರೆಲ್ಲರೂ ಗುರುತಿಸಿಕೊಳ್ಳಬೇಕು. ಅದೇನೆಂದರೆ ದೇವರು ಯಾರಿಗೂ ಅರ್ಥವಾಗದವನು. ದೇವರು ಧರ್ಮಯುತನೇ ಅಲ್ಲದೇ ಧರ್ಮಾತೀತನು ಕೂಡಾ ಎಂದು ಹೇಳಬಹುದು. ಧರ್ಮಾತೀತನು ಎನ್ನುವುದಕ್ಕೆ ಕೂಡಾ ಶಾಸ್ತ್ರಬದ್ಧತೆ ಇದೆ. ಭಗವದ್ಗೀತೆಯಲ್ಲಿ ಕೊನೆಯ ಮೋಕ್ಷಸನ್ಯಾಸ ಯೋಗದಲ್ಲಿ 66ನೇ ಶ್ಲೋಕದಲ್ಲಿ **"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"** ಎಂದು ಹೇಳಲ್ಪಟ್ಟಿದೆ. ದೇವರಿಗೆ ಇರುವ ಸರ್ವ ಧರ್ಮಗಳನ್ನು ಬಿಟ್ಟು ದೇವರನೊಬ್ಬನನ್ನೇ ಶರಣು ಹೊಂದಿದಾಗ ಎಂದು ಶ್ಲೋಕದಲ್ಲಿನ ಅರ್ಥ. ಈ ಶ್ಲೋಕದ ಪ್ರಕಾರ ದೇವರು ಧರ್ಮಕ್ಕು ಕೂಡಾ ಅತೀತನೆಂದು ತಿಳಿಯುತ್ತಿದೆ. ಅಜೋಪಿ = ಹುಟ್ಟುವಿಕೆ ಇಲ್ಲದವನು ಎನ್ನುವುದು ಧರ್ಮವೇ, ಆದರೆ ಒಂದು ವಿಧವಾಗಿ ಧರ್ಮಕ್ಕೆ ಕೂಡಾ ಅತೀತನಾಗಿ ಸರ್ವಧರ್ಮಾನ್ ಪರಿತ್ಯಜ್ಯ = ಎಲ್ಲಾ ಧರ್ಮಗಳನ್ನು ಬಿಟ್ಟು ಹೇಳಲ್ಪಟ್ಟಿರುವುದು. ಇದನ್ನನುಸರಿಸಿ ದೇವರು ಧರ್ಮಯುತನೇ ಅಲ್ಲದೇ ಧರ್ಮಾತೀತನೆನ್ನುವುದಕ್ಕೆ ಕೂಡಾ ಅವಕಾಶವೇರ್ಪ ಟ್ಟಿದೆ. ಹಾಗೆ ಧರ್ಮಾ ತೀತನೆಂದು ಹೇಳುವುದಕ್ಕೆ ಕೂಡಾ ಒಂದು ಮುಖ್ಯವಾದ ಕಾರಣ ಇದೆ. ಆ ಕಾರಣವೇನೆಂದರೆ!

ದೇವರು ಎಂತಹವನೊ, ಹೇಗಿದ್ದಾನೊ, ಯಾರಿಗೂ ತಿಳಿದಿಲ್ಲ. ದೇವರು ಊಹಾತೀತನು, ಯಾರ ಊಹೆಗೂ ಸಿಗುವುದಿಲ್ಲ. ದೇವರು ಇಂದ್ರಿಯಾತೀತನು, ಯಾರ ಕಣ್ಣಿಗು ಕಾಣಿಸುವವನೂ ಅಲ್ಲ, ಯಾರ ಕಿವಿಗೆ ಕೇಳಿಸುವವನೂ ಅಲ್ಲ. ಆದ್ದರಿಂದ ಭೂಮಿಮೇಲೆ ಇರುವ ಯೋಗಿಗಳಾಗಲಿ, ಜ್ಞಾನಿಗಳಾಗಲಿ, ತಪಸ್ವಿಕರಾಗಲಿ, ದೇವರ್ಷಿಗಳಾಗಲಿ, ಬ್ರಹ್ಮರ್ಷಿಗಳಾಗಲಿ, ದೇವರು ನನಗೆ ಗೊತ್ತು,

ನಾನು ನೋಡಿದ್ದೀನೆನ್ನುವ ಯಾರಾದರಾಗಲಿ ದೇವರನ್ನು ಇಲ್ಲಿಯವರೆಗೂ ನೋಡಲಿಲ್ಲ, ದೇವರು ಯಾರಿಗೂ ತಿಳಿಯುವುದಿಲ್ಲ. ದೇವರು ಎಂದರೇ ಹುಡುಕಬೇಕಾದವನೆಂದು ಅರ್ಥ ಆದರೆ, ತಿಳಿದವನೆಂದು ಅರ್ಥ ಅಲ್ಲ. ಯಾರಿಗೂ ತಿಳಿಯದ ದೇವರನ್ನು ಕುರಿತು ಭೂಮಿ ಮೇಲೆ ಯಾರಿಗೂ ತಿಳಿದಿಲ್ಲವೆಂದು ಹೇಳಬಹುದು. ಇದೇ ವಿಷಯವನ್ನೇ ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 18ನೇ ವಾಕ್ಯದಲ್ಲಿ **"ಯಾರೂ ಎಂದಿಗೂ ದೇವರನ್ನು ನೋಡಲಿಲ್ಲ"** ಎಂದು ಬರೆದಿದ್ದಾರೆ. ಅಂತಹ ದೇವರನ್ನು ಕುರಿತು ವಿವರಗಳು ತಿಳಿದುಕೊಂಡು ದೇವರನ್ನು ಸೇರುವುದಕ್ಕೆ, ದೇವರ ವಿವರ (ಜ್ಞಾನ) ತಿಳಿಸುವವನು ಒಬ್ಬನಿರಬೇಕಲ್ಲವೆ! **ದೇವರ ವಿಷಯ ದೇವರಿಗೆ ಹೊರತು ಯಾರಿಗೂ ತಿಳಿಯದಿರುವಾಗ, ಭೂಮಂಡಲದಲ್ಲಿ ದೇವರ ಜ್ಞಾನವನ್ನು ತಿಳಿಸುವವನು ಯಾರೂ ಇಲ್ಲವೆಂದೇ ಹೇಳಬಹುದು. ಆದ್ದರಿಂದ ದೇವರ ಜ್ಞಾನವೇನೊ, ದೇವರ ಧರ್ಮವೇನೊ ತಿಳಿಯಬೇಕೆಂದರೆ ದೇವರೇ ತಿಳಿಸಬೇಕು. ದೇವರ ಜ್ಞಾನವನ್ನು ತಿಳಿಸಿದವನೇ ಗುರು. ಭೂಮಿಮೇಲೆ ದೇವರು ಯಾರಿಗೂ ತಿಳಿಯದಿರುವಾಗ, ಗುರು ಎನ್ನುವವನು ಇಲ್ಲವೆಂದೇ ಹೇಳಬಹುದು.** ಆದ್ದರಿಂದ ತನ್ನ ಜ್ಞಾನವನ್ನು ತಿಳಿಸುವುದಕ್ಕೆ ದೇವರೇ ಗುರುವಾಗಿ ಭೂಮಿಮೇಲಕ್ಕೆ ಬರಬೇಕಾಗಿದೆ. ದೈವಜ್ಞಾನ ಮನುಷ್ಯರಿಗೆ ತಿಳಿಸುವುದಕ್ಕೆ ದೇವರೇ ಭೂಮಿಮೇಲೆ ಹುಟ್ಟಬೇಕಾದ ಅವಶ್ಯಕತೆ ಇದೆ. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಐದನೇ (5) ಶ್ಲೋಕದಲ್ಲಿ ನಾನು ಎಷ್ಟೋಸಲ ಹುಟ್ಟಿದ್ದೇನೆಂದು ಹೇಳುತ್ತಾ **"ಬಹೂನಿಮೇ ವ್ಯತೀತಾನಿ ಜನ್ಮಾನಿ"** ಎಂದು ಹೇಳಿದ್ದಾರೆ. ಹಾಗೆಯೇ ಆರನೇ (6) ಶ್ಲೋಕದಲ್ಲಿ **"ಪ್ರಕೃತಿಂ ಸ್ವಾಮಧಿಷ್ಟಾಯ ಸಂಭವಾಮಿ ಆತ್ಮ ಮಾಯಯಾ'** ನನ್ನ ಪ್ರಕೃತಿಯಿಂದ ಕೂಡಿ ನಾನು ಶರೀರವನ್ನು ಧರಿಸಿ ಆತ್ಮದೊಂದಿಗೆ, ಗುಣಗಳೊಂದಿಗೆ (ಮಾಯೆಯೊಂದಿಗೆ) ಹುಟ್ಟುತ್ತಿದ್ದೇನೆ ಎಂದು ಹೇಳುವುದು ನಡೆದಿದೆ. ನಂತರ ಏಳನೇ (7) ಶ್ಲೋಕದಲ್ಲಿ **"ಸೃಜಾಮ್ಯಹಮ್"** ನನ್ನನ್ನು ನಾನು ಹುಟ್ಟಿಸಿಕೊಳ್ಳುತ್ತಿದ್ದೇನೆ ಎಂದಿದ್ದಾನೆ. ಅಷ್ಟೇ ಅಲ್ಲದೆ ಎಂಟನೆಯ (8) ಶ್ಲೋಕದಲ್ಲಿ **"ಸಂಭವಾಮಿ ಯುಗೇ ಯುಗೇ"** ಕೆಲವು ಯುಗಗಳಿಗೊಂದುಸಲ ಹುಟ್ಟುತ್ತಿರುತ್ತೇನೆಂದು

ಕೂಡಾ ಹೇಳುವುದು ನಡೆದಿದೆ. ಇನ್ನೂ ಒಂಭತ್ತನೇ (9) ಶ್ಲೋಕದಲ್ಲಿ **"ಜನ್ಮ ಕರ್ಮಚ ಮೇ ದಿವ್ಯಮೇವಂ ಯೋವೇತ್ತಿ ತತ್ವತಃ, ತ್ಯಕ್ತ್ವಾದೇಹಂ ಪುನರ್ಜನ್ಮನೈತಿ ಮಾಮೇತಿ ಸೋರ್ಜುನ"** ಇದರ ಭಾವವೇನೆಂದರೇ! ನಾನು ಜನ್ಮಿಸಿದಾಗ ನನ್ನ ದಿವ್ಯವಾದ ಜನ್ಮವನ್ನು ತತ್ತ್ವಜ್ಞನಾದ ಯಾರು ತಿಳಿದುಕೊಳ್ಳುತ್ತಾನೋ, ಅವನು ಶರೀರವನ್ನು ಬಿಟ್ಟು ಮರಣಿಸಿದ ನಂತರ ಪುನಃ ಹುಟ್ಟುವುದಿಲ್ಲ. ಅವನು ನನ್ನೊಳಗೆ ಐಕ್ಯವಾಗುತ್ತಾನೆ, ಈ ವಾಕ್ಯವನ್ನನುಸರಿಸಿ ದೇವರು ಮನುಷ್ಯನಾಗಿ ಹುಟ್ಟುತ್ತಿದ್ದಾನೆಂದು ತಿಳಿಯುತ್ತಿದೆ. ಹಾಗೆ ಹುಟ್ಟಿದವನೇ ದೈವ ಜ್ಞಾನವನ್ನು ತಿಳಿಸುವ ಗುರು. ಭೂಮಿಮೇಲೆ ಸಾಮಾನ್ಯ ಮನುಷ್ಯರ್ಯಾರೂ ಗುರುಗಳಲ್ಲ. ಇದೇ ವಿಷಯವನ್ನೇ ದೇವರೇ ನಿನಗೆ ಗುರು, ಭೂಮಿಮೇಲೆ ಮನುಷ್ಯರನ್ನು ಗುರುವೆಂದು ಹೆಸರಿಟ್ಟು ಕರೆಯಬೇಡವೆಂದು ಬೈಬಲ್ ಗ್ರಂಥದಲ್ಲಿ ಹೇಳಿದ್ದಾರೆ. ಮತ್ತಾಯ ಸುವಾರ್ತೆಯಲ್ಲಿ 23ನೇ ಅಧ್ಯಾಯದಲ್ಲಿ 10ನೇ ವಚನದಲ್ಲಿ **"ನೀವು ಗುರುಗಳೆಂದು ಕರೆಯಲ್ಪಡಬೇಡ"** ಎಂದು ಹೇಳಲಾಗಿದೆ. ಇದನ್ನನುಸರಿಸಿ ದೇವರೇ ಗುರುವೆಂದು ಪರೋಕ್ಷವಾಗಿ ಹೇಳುವುದಾಗಿದೆಯೆಂದು ಅರ್ಥ ವಾಗುತ್ತಿದೆ. ಈ ರೀತಿಯಾಗಿ ದೇವರು ಭೂಮಿಮೇಲೆ ಜ್ಞಾನವನ್ನು ಧರ್ಮವನ್ನು ತಿಳಿಸುವುದಕ್ಕೆ ಹುಟ್ಟುತ್ತಿದ್ದಾನೆಂದು ಶಾಸ್ತ್ರದ ಪ್ರಕಾರ ಹೇಳಬಹುದು.

ಒಂದುಕಡೆ ಹುಟ್ಟುತ್ತಾನೆಂದು, ಒಂದುಕಡೆ ಹುಟ್ಟುವುದಿಲ್ಲವೆಂದು ಪರಸ್ಪರ ವಿರುದ್ಧವಾಗಿ ಶಾಸ್ತ್ರ ಹೇಳುತ್ತದಾ? ಹಾಗೆ ಹೇಳಿರುವುದು ಶಾಸ್ತ್ರವಾಗುತ್ತದಾ? ಎಂದು ಯಾರಾದರೂ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಪರಸ್ಪರ ವಿರುದ್ಧವಾಗಿ ಇರುವುದು ಶಾಸ್ತ್ರವಲ್ಲ. ಷಟ್ ಶಾಸ್ತ್ರಗಳಲ್ಲಿ ದೊಡ್ಡದಾದ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಯಾವ ಲೋಪವಿರುವುದಿಲ್ಲ. **ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರಬದ್ಧತೆ ಎಷ್ಟು ಅಗತ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಕೂಡಾ ಶಾಸ್ತ್ರಬದ್ಧತೆ ಅಷ್ಟೇ ಅಗತ್ಯವಾಗುತ್ತದೆ.** ದೇವರು ಹುಟ್ಟುವುದಿಲ್ಲ ನಾಶವಾಗುವುದಿಲ್ಲ ಎನ್ನುವುದರಲ್ಲಿ ಎಷ್ಟು ಶಾಸ್ತ್ರಬದ್ಧತೆ ಇದೆಯೋ, ಅಷ್ಟೇ ಶಾಸ್ತ್ರಬದ್ದತೆ ದೇವರು ಹುಟ್ಟುತ್ತಾನೆ ಎನ್ನುವುದರಲ್ಲಿ ಕೂಡಾ

ಇದೆ. ಆದರೆ ಇಲ್ಲಿ ಎರಡೂ ಶಾಸ್ತ್ರಬದ್ಧತೆ ಹೇಗೆ ಆಗಿವೆಯೋ ಪರಿಶೀಲಿಸಿ ನೋಡಿದರೆ, ಸಮುದ್ರದಲ್ಲಿನ ನೀರು ನಮಗೆ ಕಾಣಿಸದಂತೆ ಬಂದು ಮಳೆಯ ರೂಪದಲ್ಲಿ ಬೀಳುತ್ತಿದೆ. ಮಳೆಯಿಂದ ಬಂದಿರುವ ನೀರು ನಮಗೆ ಉಪಯೋಗ ಪಡುತ್ತಿದೆ. ಇಲ್ಲಿ ಸ್ವಲ್ಪ ಯೋಚಿಸಿ ನೋಡೋಣ, ಸಮುದ್ರ ನೀರು ಪೂರ್ತಿ ಉಪ್ಪುನೀರು, ಆದ್ದರಿಂದ ಸಮುದ್ರದ ನೀರು ಕುಡಿಯುವುದಕ್ಕೆ ಯಾರಿಗೂ ಉಪಯೋಗಪಡುವುದಿಲ್ಲ ಎನ್ನುವ ಮಾತು ಪೂರ್ತಿ ಸತ್ಯ. ಅದೇ ಸಮುದ್ರದಲ್ಲಿನ ನೀರೇ ಮಳೆ ರೂಪದಲ್ಲಿ ಬಂದಾಗ ಕುಡಿಯುವುದಕ್ಕೆ ಎಲ್ಲರಿಗೂ ಉಪಯೋಗ ಪಡುವುದು ಕೂಡಾ ನಿಜವೇ. ಈಗ ಸಮುದ್ರದ ನೀರು ಕುಡಿಯುವುದಕ್ಕೆ ಯಾರಿಗೂ ಉಪಯೋಗಪಡುವುದಿಲ್ಲ ಎನ್ನುವುದು ಸತ್ಯವೇ, ಹಾಗೆಯೇ ಸಮುದ್ರದಲ್ಲಿನ ನೀರೇ ಬದಲಾವಣೆಯಾಗಿ ಕುಡಿಯುವುದಕ್ಕೆ ಎಲ್ಲರಿಗೂ ಉಪಯೋಗಪಡುವುದು ಕೂಡಾ ನಿಜವೇ. ಸಮುದ್ರದಲ್ಲಿನ ನೀರು ಉಪ್ಪುನೀರಾಗಿ ಮನುಷ್ಯರಿಗೆ ಉಪಯೋಗಪಡಲಿಲ್ಲ. ಆದ್ದರಿಂದ ಅದು ಯಾರಿಗೂ ಉಪಯೋಗ ಪಡುವುದಿಲ್ಲ ಎನ್ನುವುದು ಎಷ್ಟು ಸತ್ಯವೋ, ಮಳೆಯಾಗಿ ಬದಲಾದ ಸಮುದ್ರದ ನೀರು ಒಳ್ಳೆಯ ನೀರಾಗಿ ಎಲ್ಲರಿಗೂ ಉಪಯೋಗಪಡುತ್ತಿದೆ ಎನ್ನುವುದು ಅಷ್ಟೇ ಸತ್ಯವಾಗುತ್ತದೆ. ಸಮುದ್ರದಲ್ಲಿರುವುದು ನೀರೇ, ಮಳೆಬಂದು ನದಿಯಾಗಿ ಇರುವುದು ಕೂಡಾ ನೀರೇ. ಸಮುದ್ರದಲ್ಲಿ ಇರುವುದು ನೀರು ಎಂದಾಗಲೀ, ನದಿಯಲ್ಲಿರುವುದು ನೀರಲ್ಲವೆಂದು ಯಾರೂ ಅನ್ನಲಾರರು. ಏಕೆಂದರೆ ಸಮುದ್ರದ ನೀರಿಗೆ ಯಾವ ಧರ್ಮವಿದೆಯೊ, ನದಿಯಲ್ಲಿನ ನೀರಿಗೂ ಸಹ ಅದೇ ಧರ್ಮ ಇದೆ. ಸಮುದ್ರದ ನೀರಿನಲ್ಲಿ ಆಕ್ಸಿಜನ್, ಹೈಡ್ರೋಜನ್ ಇದ್ದಂತೆ ನದಿಯಲ್ಲಿನ ನೀರಿಗೂ ಸಹ ಆಕ್ಸಿಜನ್, ಹೈಡ್ರೋಜನ್ ಇವೆ. ನೀರಿಗೆ ಸಂಬಂಧಿಸಿದ ಧರ್ಮಗಳಲ್ಲಿ ಸಮುದ್ರದ ನೀರಿಗಾಗಲಿ, ನದಿ ನೀರಿಗಾಗಲಿ ಯಾವ ಬದಲಾವಣೆ ಯಿಲ್ಲ. ಆದ್ದರಿಂದ ಸಮುದ್ರದ ನೀರನ್ನು, ನದಿ ನೀರನ್ನು ಒಂದೇ ಎಂದು ಹೇಳುವುದಕ್ಕೆ ಯಾವ ಅಡತಡೆಗಳು ಇಲ್ಲ. ಅದೇ ವಿಧವಾಗಿ ದೇವರು ಸಮುದ್ರದಂತಹವನು ಎಂದುಕೊಳ್ಳೋಣ. ದೇವರು ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ಶರೀರ ಧರಿಸಿ ಹುಟ್ಟಿದಾಗ, ಆ ಜನ್ಮವನ್ನು ಭಗವಂತನು ಎನ್ನುತ್ತೇವೆ.

ಸಮುದ್ರದಲ್ಲಿನ ಉಪ್ಪುನೀರು ಮಳೆಯಾಗಿ ಬಂದು ಒಳ್ಳೆಯ ನೀರಿನ ನದಿಯಾದಾಗ, ನದಿಯನ್ನು ಸಮುದ್ರ ಎಂದು ಹೇಗೆ ಅನ್ನುವುದಿಲ್ಲವೋ, ಹಾಗೆಯೇ ದೇವರು ಭಗವಂತನಾಗಿ ಬಂದಾಗ ಭಗವಂತನನ್ನು ದೇವರು ಎಂದು ಕರೆಯುವುದಿಲ್ಲ. ಸಮುದ್ರ ಬೇರೆ, ನದಿ ಬೇರೆ ಆದಂತೆ, ದೇವರು ಬೇರೆ, ಭಗವಂತನು ಬೇರೆಯೆಂದು ತಿಳಿಯಬೇಕು. ಸಮುದ್ರದಲ್ಲಿನ ನೀರನ್ನು ನೂರಾರೂಕೋಟಿ ಭಾಗಗಳಾಗಿ ವಿಭಜಿಸಿದರೆ ಅದರಲ್ಲಿನ ಒಂದು ಭಾಗವೇ ನದಿಯಾದಂತೆ, ದೇವರಿಗೆ ಇರುವ ಕೋಟಿ ಅಂಶಗಳಲ್ಲಿ ಒಂದು ಅಂಶಮಾತ್ರವೇ ಭಗವಂತನಾಗಿ ಅವತರಿಸುತ್ತಿದೆ. ಸಮುದ್ರದಲ್ಲಿನ ನೀರೇ ಭೂಮಿಮೇಲೆ ನದಿಯಾಗಿ ಬದಲಾದರೂ, ಸಮುದ್ರದಲ್ಲಿ ಯಾವ ಬದಲಾವಣೆ ಕಾಣಿಸದೆ ಯಥಾತಥವಾಗಿ ಇರುವಂತೆ, ದೇವರು ಭಗವಂತನಾಗಿ ಹುಟ್ಟಿದರೂ ದೇವರಲ್ಲಿ ಯಾವ ಲೋಪವಾಗಲಿ, ಬದಲಾವಣೆಯಾಗಲಿ ಇಲ್ಲದೇ ಯಥಾತಥವಾಗಿ ಇರುತ್ತದೆ. ಸಮುದ್ರ ಬೇರೆ, ನದಿ ಬೇರೆಯಾದಷ್ಟು ಮಾತ್ರಕ್ಕೆ, ಸಮುದ್ರಕ್ಕಿಂತ ಭಿನ್ನವಾಗಿ ನದಿ ಕಾಣಿಸಿದಷ್ಟು ಮಾತ್ರಕ್ಕೆ ಸಮುದ್ರದಲ್ಲಿನ ನೀರಿಗೆ, ನದಿಯಲ್ಲಿನ ನೀರಿಗೆ ಧರ್ಮದಲ್ಲಿ ಯಾವ ಭೇದವೂ ಇಲ್ಲ. ಆದ್ದರಿಂದ ಸಮುದ್ರದ ನೀರನ್ನು, ನದಿ ನೀರನ್ನು ಒಂದಾಗಿಯೇ ಹೇಳಬಹುದು. ನದಿ ಸಮುದ್ರ ಬೇರೆಬೇರೆಯೆಂದು ಹೇಳುವುದು ಸತ್ಯವೇ ಆದರೆ, ನದಿಯಲ್ಲಿನ ನೀರು, ಸಮುದ್ರದಲ್ಲಿನ ನೀರು ಬೇರೆಬೇರೆಯೆಂದು ಹೇಳುವುದು ಅಸತ್ಯವಾಗುತ್ತದೆ. ಹಾಗೆ ಹೇಳುವುದು ಜ್ಞಾನವೂ ಅಲ್ಲ, ವಿಜ್ಞಾನವೂ ಅಲ್ಲ.

ದೇವರನ್ನು ಸಮುದ್ರವಾಗಿ, ಭಗವಂತನನ್ನು ನದಿಯಾಗಿ ಹೋಲಿಸಿ ಕೊಂಡರೆ ನದಿಯಿಂದ ಮನುಷ್ಯರಿಗೆ ದಾಹ ತೀರಿದಂತೆ, ಭಗವಂತನಿಂದ ಮನುಷ್ಯರಿಗೆ ಜ್ಞಾನ ದಾಹ ತೀರುತ್ತದೆ. ಸಮುದ್ರ ಮಾನವರ ದಾಹಕ್ಕೆ ಉಪಯೋಗಪಡುವಂತೆ, ದೇವರು ಮಾನವರಿಗೆ ಯಾವ ಕೆಲಸ ಮಾಡದವನಾಗಿ ಸ್ತಬ್ಧತೆಯಾಗಿ ಇರುತ್ತಾನೆ. ಒಂದೇ ನೀರು ಉಪ್ಪುನೀರಾಗಿ ಸಮುದ್ರದಲ್ಲಿ, ಒಳ್ಳೆಯನೀರಾಗಿ ನದಿಯಲ್ಲಿ ಇರುವಂತೆ, ಒಂದೇ ದೇವರು ಕಾಣಿಸದ ಪರಮಾತ್ಮನಾಗಿ ಮತ್ತು ಕಾಣಿಸುವ ಭಗವಂತನಾಗಿ ಇದ್ದಾನೆಂದು ತಿಳಿಯಬೇಕು.

ಹುಟ್ಟದ ದೇವರೇ ಹುಟ್ಟಿದ ಭಗವಂತನಾಗಿ, ಕೆಲಸ ಮಾಡದ ದೇವರೇ ಕೆಲಸ ಮಾಡುವ ಭಗವಂತನಾಗಿ, ಆಕಾರವಿಲ್ಲದ ದೇವರೇ ಆಕಾರವಿರುವ ಭಗವಂತನಾಗಿ ಇದ್ದಾನೆಂದು ತಿಳಿದವನೇ ಸಂಪೂರ್ಣ ಜ್ಞಾನಿಯಾಗುತ್ತಾನೆ. ಹಾಗೆ ತಿಳಿಯದೆ ಹುಟ್ಟಿದವನು ದೇವರು ಅಲ್ಲವೆಂದರೂ, ದೇವರು ಭಗವಂತನಾಗಿ ಹುಟ್ಟುವುದಿಲ್ಲ ಎಂದರೂ, ಅಂತಹವನು ಕುರುಡನಂತೆ ಮಾತನಾಡಿದಂತಾಗುತ್ತದೆ. **ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರು ದೇವರಾಗಿ ಹುಟ್ಟುವುದಿಲ್ಲ. ಆದರೆ ದೇವರು ಭಗವಂತನಾಗಿ ಹುಟ್ಟುತ್ತಾನೆ. ದೇವರು ಬೇರೆ ಭಗವಂತನು ಬೇರೆ. ಆದರೂ ದೇವರೇ ಭಗವಂತನಾಗುತ್ತಾನೆ, ಭಗವಂತನೇ ದೇವರಾಗುತ್ತಾನೆ.** ಈ ಸೂತ್ರವನ್ನು ಅನುಸರಿಸಿಯೇ ಭಗವಂತನಾದ ಕೃಷ್ಣನು ಗೀತೆಯಲ್ಲಿ ಸರ್ವಜೀವರಾಶಿಗಳಿಗೆ ಈಶ್ವರನು (ದೇವರು) ಆದರೂ ನಾನು ನನ್ನ ಪ್ರಕೃತಿಯನ್ನಾವರಿಸಿ ಆತ್ಮದೊಂದಿಗೆ, ಗುಣಗಳೊಂದಿಗೆ ಕೂಡಿ ಹುಟ್ಟುತ್ತಿದ್ದೇನೆಂದು ಹೇಳುತ್ತಾ ಈ ಶ್ಲೋಕವನ್ನು ಹೇಳಿದ್ದಾನೆ.

ಅಧ್ಯಾಯ ಜ್ಞಾನಯೋಗ. ಶ್ಲೋಕ ಆರರಲ್ಲಿ **"ಅಜೋಪಿ ಸನ್ನವ್ಯಯಾತ್ಮ ಭೂತಾನಾ ಮೀಶ್ವರೋಪಿಸನ್, ಪ್ರಕೃತಿಂ ಸ್ವಾಮದಿಷ್ಠಾಯ ಸಮ್ಭವಾಮ್ಯಾತ್ಮ ಮಾಯಯಾ"** ಈ ಶ್ಲೋಕದಲ್ಲಿ ದೇವರಾಗಿ ಹುಟ್ಟುವುದಿಲ್ಲವೆಂದು, ಭಗವಂತನಾಗಿ ಶರೀರ ಧರಿಸಿ ಹುಟ್ಟುತ್ತೇನೆಂದು ಕೃಷ್ಣನು ಸ್ವತಃವಾಗಿ ಹೇಳುವುದನ್ನು ಗಮನಿಸಬಹುದು. ದೇವರು ಅವತರಿಸುತ್ತಾನೆಂದು ಒಂದು ಇಂದೂಮತ (ಹಿಂದೂಮತ) ದಲ್ಲಿಯೇ ಅಲ್ಲದೆ, ಮನುಷ್ಯನಾಗಿ ಹುಟ್ಟಿದವನು ದೇವರೆನ್ನುವುದಕ್ಕೆ ಆಧಾರವಾಗಿ ಕ್ರೈಸ್ತರಲ್ಲಿನ ಬೈಬಲ್ ಗ್ರಂಥದಲ್ಲಿನ ಯೇಸು ಹೇಳಿದ ಅನೇಕ ಸಂದರ್ಭಗಳಲ್ಲಿನ ಅನೇಕ ಮಾತುಗಳನ್ನು ಅನುಸರಿಸಿ ತಿಳಿಯುತ್ತಿದೆ. ಉದಾಹರಣೆಗೆ ಯೋಹಾನ ಸುವಾರ್ತೆ 5–26 **"ತಂದೆ (ದೇವರು) ಹೇಗೊ ತನ್ನಷ್ಟಕ್ಕೆ ತಾನು ಜೀವವಿರುವವನಾಗಿದ್ದಾನೊ, ಹಾಗೆಯೇ ಕುಮಾರನು (ಭಗವಂತನು) ತನ್ನಷ್ಟಕ್ಕೆ ತಾನೇ ಜೀವವಿರುವವನಾಗಿರುವುದಕ್ಕೆ ಕುಮಾರನಿಗೆ ಅಧಿಕಾರವನ್ನು ಅನುಗ್ರಹಿಸಿದನು,"**

ಈ ವಾಕ್ಯದಲ್ಲಿ ದೇವರು ಯಾವ ಧರ್ಮದಿಂದ ಇದ್ದಾನೋ, ಭಗವಂತನು ಕೂಡಾ ಅದೇ ಧರ್ಮದಿಂದ ಇದ್ದಾನೆಂದು ತಿಳಿಯುತ್ತಿದೆ. ದೇವರು, ಭಗವಂತನು ಇಬ್ಬರು ಒಂದೇಯೆನ್ನುವುದಕ್ಕೆ ಬೈಬಲ್‌ನಲ್ಲಿ ಕೂಡಾ ಯೋಹಾನ 14–8,9,10 ವಾಕ್ಯಗಳಲ್ಲಿ ಹೀಗೆ ಇದೆ. **"ಪ್ರಭುವಾ! ತಂದೆಯನ್ನು (ದೇವರನ್ನು) ನಮಗೆ ತೋರಿಸು."** ನಮಗಷ್ಟೇ ಸಾಕೆಂದು ಆತನೊಂದಿಗೆ ಹೇಳಿದಾಗ, ಯೇಸು ಹೀಗೆ ಹೇಳಿದ್ದಾನೆ. **ನಾನಿಷ್ಟುಕಾಲ ನಿಮ್ಮ ಹತ್ತಿರ ಇದ್ದೇನೆ ನೀನು ನನ್ನನ್ನು ತಿಳಿಯಲಿಲ್ಲವಾ? ನನ್ನನ್ನು ನೋಡಿದವನು ತಂದೆಯನ್ನು (ದೇವರನ್ನು) ನೋಡಿದ್ದಾನೆ. ಆದ್ದರಿಂದ ತಂದೆಯನ್ನು (ದೇವರನ್ನು) ನಮಗೆ ತೋರಿಸೆಂದು ಏಕೆ ಕೇಳುತ್ತಿದ್ದೀಯ, ತಂದೆಯಲ್ಲಿ ನಾನು, ನನ್ನಲ್ಲಿ ತಂದೆಯು ಇದ್ದೇವೆಂದು ನೀವು ನಂಬುತ್ತಿಲ್ಲವಾ?"** ಎಂದು ಹೇಳಿದ್ದಾನೆ. ಇದನ್ನನುಸರಿಸಿ ಭಗವದ್ಗೀತೆಯಲ್ಲಿ ದೇವರು ಭಗವಂತನಾಗಿ ಇರುತ್ತಾನೆಂದು ಹೇಳಿದ ಮಾತಿಗೆ ಈಮಾತು ಸಮಾನವಾಗಿ ಇದೆಯೆಂದು ತಿಳಿಯುತ್ತಿದೆ. ಈ ರೀತಿಯಾಗಿ ಇತರ ಮತಗಳು ಕೂಡಾ ಭಗವದ್ಗೀತೆಯಲ್ಲಿ ಹೇಳಿದಂತೆ ದೇವರು ಭಗವಂತನಾಗಿ ಬರುತ್ತಾನೆಂದು, ದೇವರು ಭಗವಂತನು ಒಂದೇಯೆಂದು, ದೇವರ ಧರ್ಮಗಳು ಇರುವವನೇ ಭಗವಂತನೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಯಾವ ವಿಧವಾಗಿ ಒಳ್ಳೆಯನೀರಿನ ನದಿ ಪ್ರವಹಿಸಿ ಕೊನೆಗೆ ಸಮುದ್ರದಲ್ಲಿ ಸೇರುತ್ತಿದೆಯೊ ಅದೇ ವಿಧವಾಗಿ ಭಗವಂತನಾಗಿ ಇರುವವನು ಕೊನೆಗೆ ದೇವರಲ್ಲಿ ಸೇರಿಹೋಗುತ್ತಾನೆ. ಸಮುದ್ರದಿಂದ ಬಂದಿರುವ ನೀರು ಒಳ್ಳೆಯನೀರಾಗಿ ಪ್ರಜೆಗಳಿಗೆ ಉಪಯೋಗ ಪಟ್ಟು, ಕೊನೆಗೆ ಎಲ್ಲಿಂದ ಬಂದಿದೆಯೋ ಪುನಃ ಅಲ್ಲಿಗೇ ಸೇರಿ ಸಮುದ್ರವಾಗಿ ಬದಲಾವಣೆಯಾಗುತ್ತಿದೆ. ಹಾಗೆಯೇ ದೇವರಿಂದ ಬಂದಿರುವ ಅಂಶ ಭಗವಂತನಾಗಿ ಕಾಣಿಸಿ, ತನ್ನ ಧರ್ಮಗಳನ್ನು ಬೋಧಿಸಿ, ಪುನಃ ದೇವರಾಗಿಯೇ ಬದಲಾಗಿಹೋಗುತ್ತಿದೆ. ದೇವರ ಅಂಶ ಭೂಮಿಮೇಲಕ್ಕೆ ಭಗವಂತನಾಗಿ ಒಂದು ಶರೀರ ಧರಿಸಿ ಬಂದಾಗ, ತಮ್ಮೊಂದಿಗೆ ಕಾಣಿಸುವ ವ್ಯಕ್ತಿಯನ್ನು ಭಗವಂತನಾಗಿ ಯಾರೂ ಗುರುತಿಸಲಾರರು. ಆದ್ದರಿಂದ ಈತನು ಭಗವಂತನೆಂದು ಯಾರಾದರೂ ಗುರುತಿಸಿ ಹೇಳಿದರೂ ಯಾರೂ ನಂಬುವುದಿಲ್ಲ. ವಿಶೇಷವಾಗಿ ಆತ್ಮಜ್ಞಾನ ಇರುವವರು

ಭಗವಂತನನ್ನು ಗುರುತಿಸುವುದಕ್ಕೆ ಸ್ವಲ್ಪ ಅವಕಾಶವಿದ್ದರೂ, ಎಷ್ಟೋ ಅನುಮಾನಗಳನ್ನು ಮಾಯೆ ಸೃಷ್ಟಿಸುತ್ತಿದೆ. ಆದ್ದರಿಂದ ಜ್ಞಾನಿಗಳು ಬಹು ಅಪರೂಪವಾಗಿ ದೈವಾಂಶವಾದ ಭಗವಂತನನ್ನು ಗುರುತಿಸುತ್ತಾರೆ. ಶ್ರೀಕೃಷ್ಣ ಜನ್ಮದಲ್ಲಿ ಒಬ್ಬ ಭೀಷ್ಮನು ಹೊರತು ಕೃಷ್ಣನನ್ನು ಭಗವಂತನೆಂದು ಯಾರೂ ಗುರುತಿಸಲಿಲ್ಲ.

ರೂಪ ನಾಮ ಕ್ರಿಯೆಗಳು ಇಲ್ಲದ ಪರಮಾತ್ಮ, ಏನೂ ಅಲ್ಲದ ಇಂತಹದ್ದು ಎಂದು ಹೇಳುವುದಕ್ಕೆ ಸಾಧ್ಯವಿಲ್ಲದ ದೇವರು, ಆಗಾಗ ಭೂಮಿಮೇಲೆ ಒಂದು ರೂಪವನ್ನು ಧರಿಸಿ ಅವತರಿಸುತ್ತಾನೆಂದು ಹೇಳಿಕೊಂಡಿದ್ದೇವೆ. ದೇವರ ವಿಷಯಗಳು ಮಾನವರಿಗೆ ತಿಳಿಯಬೇಕೆಂದರೆ ದೇವರೇ ಸ್ವತಃವಾಗಿ ತನ್ನ ವಿಷಯಗಳನ್ನು ತಾನೇ ಹೇಳಬೇಕೆಂದು ಕೂಡಾ ಹೇಳಿಕೊಂಡಿದ್ದೇವೆ. ಮಾನವನಂತೆ ಬರುವ ದೇವರು ತನ್ನ ವಿಷಯಗಳನ್ನು ತಿಳಿಸಿ ಮಾನವರಂತೆ ಹೋಗುತ್ತಾನೆ. ದೇವರು ಮನುಷ್ಯರ ಮಧ್ಯದೊಳಗೆ ಬಂದಾಗ, ಮನುಷ್ಯರ ಮಧ್ಯದಲ್ಲಿರುವಾಗ, ಮನುಷ್ಯರ ಮಧ್ಯದಿಂದ ಹೋಗುವಾಗ ಯಾರಿಗೂ ತಿಳಿಯುವುದಿಲ್ಲ. ದೇವರ ವಿಷಯಗಳು ಇಂತಹದೆಂದು ತಿಳಿಸುವವನು ತಾನೇ ದೇವರು ಎಂದು ತಿಳಿಸುವುದಿಲ್ಲ. ಆದ್ದರಿಂದ ಮಾನವನಾಗಿ ಇರುವ ಸಮಯದಲ್ಲಿ ದೇವರನ್ನು ಯಾರೂ ಗುರುತಿಸಲಾರರು. ದೇವರು ಭೂಮಿಮೇಲೆ ತನ್ನ ಕೆಲಸಗಳನ್ನು ತಾನೇ ನಿರ್ಣಯಿಸಿಕೊಂಡು ಬರುತ್ತಾನೆ. ಆದ್ದರಿಂದ ಆತನನ್ನು "ಖುದಾ" ಎಂದು ಸಹ ಹೇಳಬಹುದು. ಖುದ್ ಆಗಿ ತನ್ನ ಕೆಲಸವನ್ನು ತಾನು ಮಾಡುವವನು ಆದ್ದರಿಂದ ಖುದಾ ಎನ್ನುತ್ತಿದ್ದೇವೆ. ತನಗೆ ಇಷ್ಟಬಂದಾಗ ತಾನು ಇತರರ ಜೋಕ್ಯ ಇಲ್ಲದೇ ಹುಟ್ಟುವವನಾದ್ದರಿಂದ ಆತನನ್ನು ಸ್ವಯಂಭು ಎಂದು ಕೂಡಾ ಕರೆಯುತ್ತಿದ್ದೇವೆ. ಸಾಧಾರಣ ಮಾನವನು ಹುಟ್ಟುವುದಕ್ಕೆ ತಂದೆ ವಿರ್ಯದಲ್ಲಿನ ವೀರ್ಯಕಣ, ತಾಯಿ ಗರ್ಭದಲ್ಲಿನ ರಜೋಕಣ ಅಗತ್ಯ. ದೇವರು ಮಾನವನಾಗಿ ಹುಟ್ಟುವುದಕ್ಕೆ ತಾಯಿವೊಂದರ ರಜೋಕಣವಾಗಲಿ, ತಂದೆವೊಂದರ ವೀರ್ಯಕಣವಾಗಲಿ ಅಗತ್ಯವಿಲ್ಲ.

ಸ್ತ್ರೀ ಪುಷ್ಪವತಿ ಅದಾಗ ಗರ್ಭಕೋಶದಲ್ಲಿ ರಜೋಕಣ ತಯಾರಾಗಿ ಗರ್ಭ ಧರಿಸುವುದಕ್ಕೆ ಅವಕಾಶವಿರುತ್ತದೆ. ಕನ್ಯ ಶರೀರದಲ್ಲಿ ರಜೋಕಣ ಇದ್ದರೂ ಪುರುಷ ವೀರ್ಯಕಣದೊಂದಿಗೆ ಗರ್ಭ ಧರಿಸುತ್ತದೆ. ಪುರುಷ ವೀರ್ಯಕಣ ಇಲ್ಲದ್ದು ಸಂತತಿ ನಡೆಯುವುದಿಲ್ಲ. ಸ್ವತಃವಾಗಿ ದೇವರೇ ಮಾನವನಾಗಿ ಹುಟ್ಟಬೇಕಾದ ಅವಶ್ಯಕತೆ ಬಂದಾಗ ದೇವರಿಗೆ ತಾಯಿ ರಜೋಕಣದೊಂದಿಗೆ ತಂದೆಯ ವಿರ್ಯಕಣದೊಂದಿಗೆ ಕೆಲಸವಿಲ್ಲ. ಆದ್ದರಿಂದ ಕನ್ಯೆಯಾದ ಸ್ತ್ರೀ ಶರೀರದಿಂದ ಆದರೂ ದೇವರು ಹುಟ್ಟುತ್ತಾನೆ. ಹಾಗೆಯೇ ಪುರುಷ ಸಂಪರ್ಕ ಇಲ್ಲದ ಸ್ತ್ರೀ ಗರ್ಭದಿಂದಾದರೂ ದೇವರು ಹುಟ್ಟುತ್ತಾನೆ. ದೇವರು ಭೂಮಿಮೇಲೆ ಹುಟ್ಟುವುದಕ್ಕೆ ತಂದೆಯ ಅವಶ್ಯಕತೆಯೇ ಇಲ್ಲ. ತಾನು ಇಂತಹವನೆಂದು, ಸ್ವತಃವಾಗಿ ಹುಟ್ಟುತ್ತೇನೆಂದು ಮನುಷ್ಯರು ತಿಳಿಯುವುದಕ್ಕೆ ಅವಕಾಶವಾಗಿ ಎಲ್ಲರಿಗೂ ತಿಳಿಯುವಂತೆ ದೇವರು ಒಂದು ಜನ್ಮ ತಾಳಿದ್ದಾನೆ. ದೇವರು ಪೂರ್ವದಲ್ಲಿ ಕೆಲವು ಜನ್ಮಗಳನ್ನು ತಾಳಿದರೂ ಪ್ರತ್ಯೇಕಿಸಿ ಕನ್ಯೆ ಹೊಟ್ಟೆಯಲ್ಲಿ ಹುಟ್ಟುವುದು ನಡೆದಿದೆ. ಆ ಜನ್ಮವೇ ಸುಮಾರು 2000 ವರ್ಷಗಳ ಪೂರ್ವ ಇಸ್ರಾಯೇಲ್ ದೇಶದಲ್ಲಿ ಬೆತ್ಲಹೇಮು ನಗರದಲ್ಲಿ ನಡೆದಿದೆ. ಸರ್ವ ಲೋಕಗಳನ್ನು ಸೃಷ್ಟಿಸಿದ ದೇವರು ತನ್ನನ್ನು ತಾನು ಸೃಷ್ಟಿಸಿಕೊಂಡ ಜನ್ಮ ಅದು. ಸ್ವಯಂಭು ಆದ ದೇವರ ಜನ್ಮ ಧನಿಕನಾಗಿ ಇರಬಹುದು ಅಥವಾ ಬಡವನಾಗಿರಬಹುದು. ತನ್ನ ಶರೀರಕ್ಕೆ ಮನುಷ್ಯರು ಯಾವ ಹೆಸರಾದರೂ ಇಟ್ಟು ಕರೆಯಬಹುದು. ಆದರೆ ನಿಜವಾಗಿ ಆತನು ಹೆಸರು ಇಲ್ಲದವನು. ಆ ದಿನಗಳಲ್ಲಿ ಆತನಿಗೆ ಸಾಧಾರಣ ಮನುಷ್ಯರು ಇಟ್ಟಿರುವ ಹೆಸರು "ಯೇಸು" ಆಗಿದ್ದು ಸ್ವಲ್ಪ ದೈವಜ್ಞಾನವನ್ನು ತಿಳಿದವರು, ಆತನಲ್ಲಿ ದೈವ ಲಕ್ಷಣಗಳನ್ನು ಗುರುತಿಸಿದವರು "ಪ್ರಭು" ಎಂದು ಹೇಳಿದ್ದಾರೆ.

"ಭು" ಎಂದರೆ ಹುಟ್ಟುವುದು ಎಂದು ತಿಳಿದುಕೊಂಡಿದ್ದೇವೆ. "ಪ್ರ" ಎಂದರೇ ಬಹಳ ವಿಶೇಷ ಇರುವುದೆಂದು ಅರ್ಥ. ಉದಾಹರಣೆಗೆ ಮುಖ್ಯ ಎನ್ನುವ ಪದಕ್ಕೆ "ಪ್ರ" ನ್ನು ಸೇರಿಸಿದರೆ ಪ್ರಾಮುಖ್ಯ ಆಗುತ್ತದೆ. "ಪ್ರ" ಎನ್ನುವ

ಶಬ್ದದ ದೊಡ್ಡತನವನ್ನು ಮುಖ್ಯಕ್ಕೆ ಜೋಡಿಸಿದರೇ ಮುಖ್ಯಕ್ಕೆ ಮತ್ತಷ್ಟು ಬೆಲೆ ಹೆಚ್ಚಾಗಿದೆ. ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಗೆ ಪ್ರ ಕೂಡಿಸಿದರೆ ಪ್ರಪಂಚವಾಗಿದೆ. ಹಾಗೆಯೇ ಳಯಕ್ಕೆ (ನಾಶಕ್ಕೆ) ಪ್ರ ಕೂಡಿಸಿದರೆ ಪ್ರಳಯವಾಗಿದೆ. ಳಯಕ್ಕು, ಪಂಚಭೂತಗಳಿಗು ಪ್ರ ವಿಶೇಷತೆಯನ್ನು ತಿಳಿಸುತ್ತಿದೆ. ಹಾಗೆಯೇ ವಿಷಯವನ್ನು ಬೋಧಿಸುವುದನ್ನು ಬೋಧ ಎನ್ನುತ್ತಿದ್ದೇವೆ. ಎಲ್ಲದಕ್ಕಿಂತ ದೊಡ್ಡ ವಿಶೇಷತೆ ಹೊಂದಿದ ಬೋಧನೆಯನ್ನು ಪ್ರಬೋಧ ಎನ್ನುತ್ತೇವೆ. ಈ ವಿಧವಾಗಿ ವಿಶೇಷತೆಯನ್ನು ಸೂಚಿಸುವ "ಪ್ರ" ಶಬ್ದಕ್ಕೆ "ಭು" ಜೋಡಿಸಿದರೆ ಪ್ರಭು ಆಗಿದೆ. ಪ್ರಭು ಎಂದರೆ ವಿಶೇಷತೆಹೊಂದಿದ ಜನ್ಮ ಇರುವವನೆಂದು ಅಥವಾ ಸಾಮಾನ್ಯ ಮಾನವನ ಜನ್ಮದಂತಲ್ಲದೆ ಮಹೋನ್ನತ ಹೊಂದಿದ ಜನ್ಮ ಎಂದು ತಿಳಿಯುತ್ತಿದೆ. ಇನ್ನೂ ವಿವರವಾಗಿ ನಿಜಾರ್ಥವಾಗಿ ಹೇಳಿಕೊಳ್ಳಬೇಕೆಂದರೆ, ಅದು ಒಂದು ಪ್ರತ್ಯೇಕ ಜನ್ಮ ಎಂದು ಹೇಳಬಹುದು. ದೇವರು ಭೂಮಿಮೇಲೆ ಜನ್ಮಿಸುವುದು ಪ್ರತ್ಯೇಕವಾದ ಜನ್ಮವೇ, ಆದ್ದರಿಂದ ಆತನನ್ನು ಪ್ರಭು ಎಂದಿದ್ದಾರೆ. ಪ್ರಭು ಎನ್ನುವುದು ಆತನ ಹೆಸರಲ್ಲ, ಆತನ ದೊಡ್ಡತನವೆಂದು ತಿಳಿಯಬೇಕು. ಪಂಚಭೂತಗಳಿಗೆ ಅಧಿಪತಿಯಾಗಿ ಅಣುಅಣುವಿನಲ್ಲಿ ಎಲ್ಲಕಡೆ ವ್ಯಾಪಿಸಿರುವ ದೇವರು ಸ್ತ್ರೀ ಶರೀರದಲ್ಲಿ ಕೂಡ ವ್ಯಾಪಿಸಿದ್ದಾನೆ. ತಾನು ಹುಟ್ಟಬೇಕೆಂದುಕೊಂಡಾಗ ಯಾವ ಸ್ತ್ರೀ ಶರೀರ ದಿಂದಾದರೂ ಶರೀರವನ್ನು ತಯಾರು ಮಾಡಿಕೊಂಡು ಬರುತ್ತಾನೆ. ಇಲ್ಲಿ ಎಲ್ಲರಿಗೂ ತಿಳಿಯದ ಮತ್ತೊಂದು ವಿಷಯ ಇದೆ. ಇದು ತಿಳಿಯದ ವಿಷಯವೇ ಅಲ್ಲ, ತಿಳಿದರೂ ಅರ್ಥವಾಗದ ವಿಷಯವೆನ್ನಬಹುದು. ಆ ವಿಷಯವೇನೆಂದರೆ!

ದೇವರು ಯಾವಾಗ ಎಲ್ಲಿ ಹುಟ್ಟಿದರೂ ಸ್ತ್ರೀ ಶರೀರದಿಂದ ಸಜೀವ ಶರೀರದದಿಂದ ಹುಟ್ಟುತ್ತಾನೆ. ಜೀವಿಯು ಎಲ್ಲಿ ಯಾವಾಗ ಹುಟ್ಟಿದರೂ ತಾಯಿ ಶರೀರದಿಂದ ಪ್ರಸವಿಸಲ್ಪಟ್ಟ ಜಡವಾದ ಶರೀರದಲ್ಲಿ ಪ್ರವೇಶಿಸಿ ಜನ್ಮಿಸುತ್ತಾನೆ. ಇದು ಇಲ್ಲಿಯವರೆಗು ಯಾರಿಗೂ ತಿಳಿಯದ ರಹಸ್ಯ. ಇದೇ ವಿಷಯವನ್ನು ಖುರಾನ್ ಗ್ರಂಥದಲ್ಲಿ 6ನೇ ಸುರಾದಲ್ಲಿ (ಅಧ್ಯಾಯ) 97ನೇ (6.97) ಆಯತ್

ಅಲ್ ಅನ್‌ಆಮ್‌ನಲ್ಲಿ **"ನಿರ್ಜೀವವಾದುದನ್ನು ಸಜೀವವಾದ ಅದರಿಂದ ವಿಸರ್ಜಿಸುವಂತೆ ಮಡುವವನು ಆತನೇ (ದೇವರೇ)"** ಎಂದು ಹೇಳಿದ್ದಾನೆ. ಇದನ್ನನುಸರಿಸಿ ಮಾನವನು ಸ್ತ್ರೀ ಶರೀರದಿಂದ ಸಜೀವವಾಗಿ ಹುಟ್ಟಲಿಲ್ಲವೆಂದು ತಿಳಿಯುತ್ತಿದೆ. ದೇವರು ಸ್ತ್ರೀ ಶರೀರದಿಂದ ಪ್ರಸವಿಸಲ್ಪಡುವ ಶರೀರದಲ್ಲಿ ಸಜೀವವಾಗಿ ಹೊರಗೆ ಬರುತ್ತಿದ್ದಾನೆ. ದೇವರು ಹೊರತು ಯಾವ ಜೀವರಾಶಿ ಆದರೂ ತಾಯಿ ಗರ್ಭದಿಂದ ಜೀವಹೊಂದಿ ಹುಟ್ಟಲಿಲ್ಲ. ಯಾವ ಜೀವಿಯಾದರೂ, ಯಾವ ಮನುಷ್ಯನಾದರೂ ಹುಟ್ಟಿದ ಶರೀರದಲ್ಲಿ ತಕ್ಷಣವೇ ಆಗಲಿ, ಸ್ವಲ್ಪ ಸಮಯಕ್ಕಾದರೂ ಸೇರುತ್ತಿದ್ದಾನೆ. ದೇವರಾದ ಭಗವಂತನು ಹಾಗಲ್ಲದೆ, ತಾಯಿ ಗರ್ಭದಿಂದಲೇ ಸಜೀವವಾಗಿ ಹುಟ್ಟುತ್ತಿದ್ದಾನೆ. ಮಾನವನಾದ ಜೀವಿಯು ಎಲ್ಲಕಡೆ ವ್ಯಾಪಿಸಲಿಲ್ಲ. ಆದ್ದರಿಂದ ಒಂದುಕಡೆ ಮರಣಿಸಿ ಮತ್ತೊಂದುಕಡೆಗೆ ಸೇರಬೇಕಾಗಿದೆ. ಒಂದು ಶರೀರವನ್ನು ಬಿಟ್ಟ ನಂತರ ಬೇರೊಂದು ಶರೀರವನ್ನು ಸೇರುತ್ತಿದ್ದಾನೆ. ದೇವರು ಜೀವಿಯಂತೆ ಒಂದುಕಡೆ ಇರುವವನಲ್ಲದೆ ಎಲ್ಲಕಡೆ ವ್ಯಾಪಿಸಿರುವವನು. ಆದ್ದರಿಂದ ಆತನು ಸ್ತ್ರೀ ಶರೀರದಿಂದಲೇ ಚೈತನ್ಯವಾಗಿ ಹೊರಗೆ ಬರುತ್ತಾನೆ. ಸ್ತ್ರೀ ಭಗದಿಂದ ಹೊರಗೆ ಬಂದವನಾದ್ದರಿಂದ ಭಗವಂತನೆಂದು ಆತನನ್ನು ನಾವು ಕರೆಯಬಹುದು. ಯಾರಿಗೂ ಇಲ್ಲದ ಜನ್ಮ ವಿಧಾನ ಒಬ್ಬ ದೇವರಿಗೆ ಮಾತ್ರವೇ ಇದೆ. ಆದ್ದರಿಂದ ಆತನು ಶರೀರ ಧರಿಸಿದಾಗ ಭಗವಂತನಾಗಿದ್ದಾನೆ. ವಿಶಾಲವಾಗಿ ವ್ಯಾಪಿಸಿ ಆಕಾರವಿಲ್ಲದ ದೇವರು ತಾನು ಎಲ್ಲಕಡೆ ಇರುತ್ತಲೇ, ತನ್ನ ಅಂಶವನ್ನು ಒಂದು ಶರೀರದಲ್ಲಿ ಪ್ರವೇಶಿಸುವಂತೆ ಮಾಡಿ ಹುಟ್ಟಿಸುವುದು ದೇವರ ಜನ್ಮವಾಗಿ ಲೆಕ್ಕಿಸಬೇಕು. ದೇವರ ಅಂಶ ಜನ್ಮಿಸಿದಾಗ ಭಗವಂತನಾಗಿದ್ದು, ದೇವರಾಗಿ ಪ್ರಪಂಚವೆಲ್ಲಾ ವ್ಯಾಪಿಸಿದ್ದಾನೆ. ದೇವರು ನಿರಾಕಾರನು, ಸರ್ವವ್ಯಾಪಿ, ಅದೇ ದೇವರು ಶರೀರವನ್ನು ಧರಿಸಿ ಸಾಕಾರನು ಹಾಗೂ ಭಗವಂತನಾಗುತ್ತಿದ್ದಾನೆ. ಈ ವಿಧವಾದ ದೇವರ ಜನ್ಮವೇ "ಯೇಸುಪ್ರಭು" ಜನ್ಮ, ದೇವರು ಎಲ್ಲಕಡೆ ಇದ್ದು ತಾನೇ ಒಬ್ಬ ಮನುಷ್ಯನಾಗಿ ಬಂದವನೇ ಪ್ರಭುವು.

ದೇವರು ಮನುಷ್ಯನಾಗಿ ಬಂದಾಗ ಎಲ್ಲಕಡೆ ವ್ಯಾಪಿಸಿರುವ ದೇವರನ್ನು ಕುರಿತು ಹೇಳುವುದೇ ಆತನ ಕರ್ತವ್ಯ. ತಾನು ದೇವರಾಗಿದ್ದರೂ, ವಿಶಾಲವಾದ ದೇವರನ್ನು ಎಂದರೆ ವಿಶಾಲವಾದ ತನ್ನನ್ನು ಕುರಿತು ತಾನೇ ಹೇಳುತ್ತಿರುವನು. ದೇವರ ವಿಷಯ ದೇವರೇ ಹೇಳಬೇಕು, ಆದರೆ ಮಾನವರ್‍ಯಾರು ಹೇಳಲಾರರು. ಮಾನವನು ಎಷ್ಟು ಜ್ಞಾನಿಯಾದರೂ ದೇವರ ವಿಷಯ ಪೂರ್ತಿ ತಿಳಿದವನಲ್ಲ. ಭಗವಂತನಾದ ದೇವರು ಹೇಳಿದರೇ ಹೊರತು ಮಾನವನಿಗೆ ದೇವರ ವಿಷಯಗಳು ತಿಳಿಯುವುದಿಲ್ಲ. ದೇವರು ಹೇಳಿದ ವಿಷಯಗಳನ್ನೇ ಮಾನವನು ಬೇರೊಬ್ಬರಿಗೆ ಹೇಳಿದರೂ, ಅವು ಅಸಂಪೂರ್ಣಗಳೇ ಹೊರತು ಸಂಪೂರ್ಣ ಗಳಾಗಿ ಇರುವುದಿಲ್ಲ. ಆದ್ದರಿಂದ ಮಾನವನು ದೇವರ ವಿಷಯಗಳನ್ನು ಬೋಧಿಸುವ ಬೋಧಕನು ಆಗಬಹುದು, ಆದರೆ ಗುರು ಆಗಲಾರನು. ಪ್ರಪಂಚದಲ್ಲಿ ಭಗವಂತನು ಮಾತ್ರ ದೇವರ ವಿಷಯಗಳನ್ನು ತಿಳಿಸುವ ಗುರು ಆಗುತ್ತಾನೆ. ಈ ಸೂತ್ರದ ಪ್ರಕಾರ ದೇವರ ಜನ್ಮವಾದ ಭಗವಂತನು ಮಾತ್ರವೇ ಜಗತ್ತಿನಲ್ಲಿ ಗುರುವಾಗುತ್ತಾನೆ. ಪ್ರಭುವಾದ ಭಗವಂತನು ಇಲ್ಲವೆ ಭಗವಂತನಾದ ಪ್ರಭುವು ತನ್ನ ನಿರಾಕಾರವನ್ನು ಕುರಿತು ಹೇಳುವುದರಲ್ಲಿ ತಂದೆಯಾದ ದೇವರೊಬ್ಬನಿದ್ದಾನೆಂದು ಹೇಳಿದ್ದಾನೆ. ಶರೀರ ಅಥವಾ ಎಲ್ಲಕಡೆ ವ್ಯಾಪಿಸಿರುವ ದೇವರು, ಶರೀರದಿಂದ ಇರುವ ತಾನು ಇಬ್ಬರೂ ಒಂದೇ ಎನ್ನುವಂತೆ **'ನನ್ನನ್ನು ನೋಡಿದವನು ನನ್ನ ತಂದೆಯನ್ನು ನೋಡಿದಂತೆ'** ಎಂದಿದ್ದಾನೆ. **ಅಷ್ಟೇ ಅಲ್ಲದೆ 'ನನ್ನ ಮಾತು ನನ್ನ ತಂದೆಮಾತು ಒಂದೇ'** ಎಂದಿದ್ದಾನೆ. ಕೆಲವು ಸಂದರ್ಭಗಳಲ್ಲಿ ದೇವರು, ಭಗವಂತನು ಇಬ್ಬರು ಒಂದೇ ಎನ್ನುವ ಭಾವಯುಕ್ತವಾದ ಮಾತುಗಳು ಕಾಣಿಸಿದರೂ ಆತನನ್ನು ಗುರುತಿಸದಂತೆ, ಮೇಲೆ ಮಾಯೆ ಎಲ್ಲರನ್ನು ಮಭ್ಯಪಡಿಸುತ್ತಿದೆ. ದೇವರಿಗೆ ವಿರುದ್ಧ ದಿಶೆಯಲ್ಲಿ ನಡೆಸುವ ಮಾಯೆ, ಮಾನವರಲ್ಲಿದ್ದು ಎದುರಾಗಿರುವ ಭಗವಂತನನ್ನಾಗಲಿ, ನಿರಾಕಾರವಾಗಿ ಎಲ್ಲಕಡೆ ವ್ಯಾಪಿಸಿರುವ ದೇವರನ್ನಾಗಲಿ ತಿಳಿಯದಹಾಗೆ ಮಾಡುತ್ತಿದೆ. ದೇವರನ್ನು ಕುರಿತು ಸ್ವತಃವಾಗಿ ಭಗವಂತನು ಹೇಳಿದ ಮಾತುಗಳನ್ನು ಮನುಷ್ಯರಿಗೆ ಅರ್ಥವಾಗದಂತೆ ಅಪಾರ್ಥವಾಗುವಂತೆ ಮಾಡಿ, ಭಗವಂತನ ಘನತೆಯನ್ನಾಗಲಿ, ದೇವರ

ಔನ್ನತ್ಯವನ್ನಾಗಲಿ ಗುರುತಿಸದಂತೆ ಮಾಡುತ್ತಿದೆ. ಭೂಮಿಮೇಲೆ ಬಂದಿರುವ ಭಗವಂತನು ಸಾಧಾರಣ ಮನುಷ್ಯನಂತೆ ಇರುವುದರಿಂದ, ಆತನನ್ನು ಮನುಷ್ಯರಿಗೆ ತಪ್ಪಾಗಿ ಅರ್ಥವಾಗುವಂತೆ ಮಾಡಿ, ಅವಮಾನ ಮಾಡುವಂತೆ ಮಾನುಷ್ಯರನ್ನು ಪ್ರೇರೇಪಿಸುತ್ತಿದೆ. ದೇವರ ದಿವ್ಯವಾದ ಜನ್ಮವನ್ನು ತಿಳಿಯಲಾರದ ಮನುಷ್ಯರು ನರಶರೀರವನ್ನು ಧರಿಸಿದ ದೇವರನ್ನು ನೋಡಿ, ಸರ್ವ ಜೀವರಾಶಿಗಳಿಗು ದೇವರಾದವನೆಂದು ತಿಳಿಯದೆ, ನಾಶವಿಲ್ಲದವನೆಂದು ತಿಳಿಯದೆ ಮೂಢರಾಗಿ ಭಗವಂತನನ್ನು ಅವಮಾನದ ಪಾಲು ಮಾಡುತ್ತಿದ್ದಾರೆ. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗ 11ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

**ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥**

ಸರ್ವಕ್ಕೆ ಸೃಷ್ಟಿಕರ್ತನಾದ ದೇವರು ಒಂದುಸಲ ತನ್ನ ಧರ್ಮಗಳನ್ನು ಭೂಮಿಮೇಲೆ ಸಂಪೂರ್ಣವಾಗಿ ಬೋಧಿಸುವುದಕ್ಕೆ ಮೂರುಸಲ ಮನುಷ್ಯನಾಗಿ ಜನ್ಮಿಸಬೇಕಾದ ಅಗತ್ಯವಿದೆ. ಮೂರು ಪ್ರದೇಶಗಳಲ್ಲಿ, ಮೂರು ಆಕಾರಗಳಲ್ಲಿ, ಮೂರು ಹೆಸರುಗಳಿಂದ ದೇವರು ಬಂದು ಹೇಳಿದಾಗ, ದೇವರಿಗೆ ಒಂದು ಸಂಪೂರ್ಣ ಅವತಾರವಾಗುತ್ತದೆ. ತಿಳಿಯದಂತೆ ಹೋದ ಧರ್ಮಗಳನ್ನು ಪುನಃ ಪುನರುದ್ಧೀಕರಿಸುವುದಕ್ಕೆ ದೇವರು ಮೂರುಸಲ ಅವತರಿಸಿದರೆ ಒಂದುಸಲ ಧರ್ಮಗಳನ್ನು ರಕ್ಷಿಸಿದಂತಾಗುತ್ತದೆ. ಆದ್ದರಿಂದ ದೇವರ ಮೂರು ಅವತಾರಗಳನ್ನು ಒಂದು ಅವತಾರವಾಗಿ ಲೆಕ್ಕಿಸಿಕೊಳ್ಳಬೇಕು. ಮೂರು ಸಲ ಮನುಷ್ಯನಾಗಿ ದೇವರು ಜನ್ಮಿಸಿದರೇನೆ ಆತನ ಧರ್ಮಗಳೆಲ್ಲ ಪೂರ್ತಿಯಾಗಿ ಹೊರಗೆ ತಿಳಿಯುತ್ತವೆ. ದೇವರು ಭೂಮಿಮೇಲೆ ಮೂರು ಆತ್ಮಗಳಾಗಿದ್ದಾನೆ. ಸಕಲ ಜೀವಿಗಳಲ್ಲಿಯೂ ಜೀವಾತ್ಮನಾಗಿ, ಆತ್ಮನಾಗಿ, ಪರಮಾತ್ಮನಾಗಿ ಇರುವ ದೇವರು, ತಾನು ಮೂರು ಆತ್ಮಗಳಾಗಿ ಎಲ್ಲರಲ್ಲಿಯೂ ಇದ್ದೇನೆಂದು ತಿಳಿಸುವುದಕ್ಕಾಗಿ ಧರ್ಮ ಸಂಸ್ಥಾಪನೆಗಾಗಿ ಮೂರು ಜನ್ಮಗಳನ್ನು ತೆಗೆದುಕೊಳ್ಳುತ್ತಿದ್ದಾನೆ. ದೇವರು

ಮೂರು ಆತ್ಮಗಳಾಗಿ ಇದ್ದಾನೆನ್ನುವುದು ಮುಖ್ಯವಾದ ಧರ್ಮ. ಆದ್ದರಿಂದ ಕ್ಷರ, ಅಕ್ಷರ, ಪುರುಷೋತ್ತಮರಿಗೆ ಗುರುತಾಗಿ ದೇವರು ಧರ್ಮಸಂಸ್ಥಾಪನೆಯಲ್ಲಿ ಮೂರುಸಲ ಅವತರಿಸುತ್ತಿದ್ದಾನೆ. ದೇವರು ಮೂರುಸಲ ಹುಟ್ಟಿದರೆ ಒಂದುಸಲ ಧರ್ಮಸಂಸ್ಥಾಪನೆ ಪೂರ್ತಿಯಾಗುತ್ತದೆ. ಗತದಲ್ಲಿ ಎಷ್ಟುಸಲ ಧರ್ಮಸಂಸ್ಥಾಪನೆ ನಡೆದಿದೆಯೊ ನಮಗೆ ತಿಳಿದಿಲ್ಲ. ಆದರೆ ಪ್ರಸ್ತುತ ಧರ್ಮಸಂಸ್ಥಾಪನೆ ನಡೆಯುತ್ತಿದೆಯೆಂದು ಮಾತ್ರ ನಮಗೆ ತಿಳಿಯುತ್ತದೆ. ಧರ್ಮಸಂಸ್ಥಾಪನೆ ಕಾರ್ಯದಲ್ಲಿ ದೇವರು ಇಂದಿಗೆ ಎರಡುಸಲ ಅವತರಿ ಸಿದ್ದಾನೆಂದು ಕೂಡಾ ತಿಳಿಯುತ್ತದೆ. **"ಶ್ರೀಕೃಷ್ಣನು ದೇವರಾ? ಭಗವಂತನಾ?"** ಎನ್ನುವ ಗ್ರಂಥದಲ್ಲಿ ಕೃಷ್ಣನು ದೇವರ ಅವತಾರವೇಯೆಂದು ಗಟ್ಟಿಯಾಗಿ ಹೇಳಿದ್ದೇವೆ. ಧರ್ಮ ಸಂಸ್ಥಾಪನೆಯಲ್ಲಿ ಕೃಷ್ಣನ ಅವತಾರ ಒಂದನೆಯದು ಆಗಿದ್ದು, ಆತನ ಎರಡನೆ ಅವತಾರದಲ್ಲಿ ಯೇಸುವಾಗಿ ಬಂದಿದ್ದಾನೆಂದು ಕೂಡಾ ಆಧಾರಗಳಿಂದ ಹೇಳಿದ್ದೇವೆ. ಧರ್ಮಸಂಸ್ಥಾಪನೆಗೋಸ್ಕರ ದೇವರು ಇಲ್ಲಿಗೆ ಎರಡು ಜನ್ಮಗಳು ತೆಗೆದುಕೊಂಡಾಗ, ಮೂರನೇ ಜನ್ಮ ಇಷ್ಟರಲ್ಲಿ ಬರುತ್ತದೆ ಅಂದುಕೊಳ್ಳುತ್ತೇವೆ. ದೇವರು ಮೂರುಸಲ ಬೇರೆಬೇರೆ ಪ್ರಾಂತ್ಯಗಳಲ್ಲಿ, ಬೇರೆಬೇರೆ ಆಕಾರಗಳಿಂದ, ಬೇರೆಬೇರೆ ಹೆಸರುಗಳಿಂದ, ಹುಟ್ಟಬೇಕಾಗಿರುವಾಗ, ಇಲ್ಲಿಗೆ ಎರಡುಸಲ ಹುಟ್ಟಿ ತನ್ನ ಧರ್ಮಗಳನ್ನು ತಿಳಿಸುವುದು ನಡೆದಿದೆ. ಮೊದಲ ಜನ್ಮಕ್ಕು ಎರಡನೆ ಜನ್ಮಕ್ಕು ಮೂರುಸಾವಿರ ವರ್ಷಗಳಕಾಲ ಹಿಡಿಸಿದೆ. ಎರಡನೆ ಜನ್ಮಕ್ಕು ಮೂರನೆ ಜನ್ಮಕ್ಕು ಎಷ್ಟುಕಾಲ ಹಿಡಿಸುತ್ತದೊ ಯಾರಿಗೂ ತಿಳಿದಿಲ್ಲ. ಎರಡನೆ ಜನ್ಮದ ನಂತರ ಇಲ್ಲಿಗೆ ಎರಡುಸಾವಿರ ವರ್ಷಗಳು ಕಳೆದಿದೆ. ಇನ್ನೂ ಎಷ್ಟುಕಾಲಕ್ಕೆ ಮೂರನೆ ಜನ್ಮ ಬರುತ್ತದೊ ತಿಳಿದಿಲ್ಲ. ಆಯಾ ಜನ್ಮಗಳಲ್ಲಿ ಅವರು ಹೇಳಿದ ಜ್ಞಾನವನ್ನನುಸರಿಸಿ ಭೂಮಿಮೇಲೆ ಮಾನವರು ಕೆಲವರು ದೇವರ ಜನ್ಮವನ್ನು ಗುರುತಿಸಬಹುದು. ಐದುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ಭಗವಂತನಿಗು (ಕೃಷ್ಣನಿಗು) ಕೆಲವರು ಭಕ್ತರಾಗಿದ್ದು, ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ಪ್ರಭುವಿಗು (ಯೇಸುಗು) ಕೆಲವರು ಭಕ್ತರಾಗಿದ್ದಾರೆ. ಐದುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ದೇವರ (ಭಗವಂತನ)

ವೊಂದರ ಆಕಾರವೂ, ಹೆಸರೂ ಬೇರೆಯಾಗಿದ್ದು, ಎರಡುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ಪ್ರಭುವೊಂದರ ಆಕಾರವೂ, ಹೆಸರು ಬೇರೆಯಾಗಿವೆ. ಎರಡು ಜನ್ಮಗಳಲ್ಲಿನ ಜೀವನಗಳು ಒಂದಕ್ಕೊಂದು ಸಂಬಂಧವಿಲ್ಲದೆ ವಿಭಿನ್ನ ವಾಗಿವೆ. ಆದ್ದರಿಂದ ಮೊದಲು ಬಂದಿರುವ ಭಗವಂತನನ್ನು ವಿಶ್ವಾಸಿಸಿ ದವರು ಎರಡನೆಸಲ ಬಂದಿರುವ ಪ್ರಭುವನ್ನು ವಿಶ್ವಾಸಿಸುತ್ತಿಲ್ಲ. ಹಾಗೆ ಎರಡನೆಸಲ ಬಂದಿರುವ ಪ್ರಭುವನ್ನು ವಿಶ್ವಾಸಿಸಿದವರು ಮೊದಲು ಬಂದಿರುವ ಭಗವಂತನನ್ನು ವಿಶ್ವಾಸಿಸುತ್ತಿಲ್ಲ. ಮೊದಲು ಭಗವಂತನ ಆಕಾರವಾದ ಕೃಷ್ಣನನ್ನು ನೋಡುತ್ತಲೇ ಅಸೂಯೆಪಡುವ ಕ್ರೈಸ್ತರು ಇದ್ದಾರೆ. ಅದೇ ವಿಧವಾಗಿಯೇ ಎರಡನೆಸಲ ಬಂದಿರುವ ಪ್ರಭುವೊಂದರ ಭಾವಚಿತ್ರವನ್ನು ನೋಡುತ್ತಲೇ ಆತನ ಮೇಲೆ ಅಸೂಯಪಡುವ ಹಿಂದೂಗಳು ಕೂಡ ಇದ್ದಾರೆ. ಮೊದಲ ಭಗವಂತನನ್ನು ಅನುಸರಿಸಿ ನಮ್ಮ ಮತ ಬೇರೆಯೆಂದು ಕೆಲವರು, ಎರಡನೆಯ ಪ್ರಭುವನ್ನು ಅನುಸರಿಸಿ ನಮ್ಮ ಮತಬೇರೆಯೆನ್ನುವವರು ಕೆಲವರು ಇದ್ದಾರೆ. ಒಂದೇ ದೇವರು ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಪ್ರಾಂತ್ಯಗಳಲ್ಲಿ, ಬೇರೆಬೇರೆ ಆಕಾರಗಳಿಂದ, ಬೇರೆಬೇರೆ ಜೀವನಶೈಲಿಯಲ್ಲಿ ಹುಟ್ಟುವುದರಿಂದ ಮಾನವರ ದೃಷ್ಟಿಯಲ್ಲಿ ಎಲ್ಲವುಗಳಲ್ಲಿ ಬೇರೆಬೇರೆಯಾಗಿ, ಹೋಲಿಕೆಗಳಿಲ್ಲದ ಆ ಇಬ್ಬರು ಹೇಳಿರುವುದು ಒಂದೇ ಜ್ಞಾನವೆಂದು ತಿಳಿಯದೆ ಹೋಗಿದ್ದಾರೆ. ಆ ಇಬ್ಬರು ಒಬ್ಬರೇಯೆಂದು ತಿಳಿಯದ ಮನುಷ್ಯರು ನಮ್ಮ ಭಗವಂತನು ದೊಡ್ಡವನೆಂದರೆ, ನಮ್ಮ ಪ್ರಭುವು ದೊಡ್ಡವನು ಎಂದು ಅವರವರ ವಿಶ್ವಾಸವನ್ನು ಅಡ್ಡವಿಟ್ಟುಕೊಂಡು ಮಾತನಾಡಿಕೊಳ್ಳುತ್ತಿದ್ದಾರೆ. ಭಗವಂತನನ್ನು ಪ್ರಭು ಭಕ್ತರು ದೂಷಿಸಿದರೆ, ಪ್ರಭುವನ್ನು ಭಗವಂತನ ಭಕ್ತರು ದೂಷಿಸುತ್ತಿದ್ದಾರೆ. ಪ್ರಭುವನ್ನು ದೂಷಿಸುವ ಭಗವಂತನ ಭಕ್ತರು ನಿಜವಾಗಲು ಭಗವಂತನನ್ನೇ ದೂಷಿಸುತ್ತಿದ್ದೇವೆಂದು ಅಂದುಕೊಳ್ಳುತ್ತಿಲ್ಲ. ಹಾಗೆಯೇ ಭಗವಂತನನ್ನು ದೂಷಿಸುವ ಪ್ರಭು ಭಕ್ತರು ನಿಜವಾಗಲು ಪ್ರಭುವನ್ನೇ ದೂಷಿಸುತ್ತಿದ್ದೇವೆಂದು ಅಂದುಕೊಳ್ಳುತ್ತಿಲ್ಲ. ಇದಕ್ಕೆಲ್ಲ ಕಾರಣ ದೇವರ ಜ್ಞಾನವನ್ನು ಕುರಿತು ಪೂರ್ತಿ ತಿಳಿಯದಿರುವುದೇ ಎಂದು ಅರ್ಥವಾಗುತ್ತಿದೆ. ದೇವರು ನಿರಾಕಾರವಾಗಿ, ಸರ್ವವ್ಯಾಪಿಯಾಗಿದ್ದು

ಭೂಮಿಮೇಲೆ ಅಧರ್ಮಗಳು ಬೆಳೆದು ಹೋದಾಗ ತನ್ನ ಧರ್ಮಗಳು ಪುನರುದ್ಧೀಕರಿಸಲು ಅವತರಿಸಬಹುದು. ಅದು ಯಾವಾಗಾದರೂ ಎಲ್ಲಿಯಾದರೂ ನಡೆಯಬಹುದು. ಹಾಗೆ ಬಂದವನು ತನ್ನ ಧರ್ಮಗಳನ್ನು ತಾನು ಹೇಳಿಹೋಗುತ್ತಾನೆ. ಹುಟ್ಟಿದ ದೇಶವನ್ನನುಸರಿಸಿ, ಹುಟ್ಟಿದ ಕಾಲವನ್ನನುಸರಿಸಿ ಭಗವಂತನು ತನ್ನ ನಡುವಳಿಕೆಯನ್ನು ನಿರ್ಣಯಿಸಿಕೊಂಡು ಬರುತ್ತಾನೆ. ಹಾಗೆ ಬಂದವನು ಮಾತನಾಡುವ ಭಾಷೆ ಬೇರೆಯಾಗಬಹುದು, ಆದರೆ ಹೇಳುವ ಜ್ಞಾನವು ಮಾತ್ರ ಒಂದೇ ಇರುತ್ತದೆ. ಹಾಗೆಯೇ ಜನ್ಮ ಜನ್ಮಕ್ಕೂ ಎಷ್ಟೋ ಭೇದಗಳಿದ್ದರೂ, ಆತನು ಬಂದ ಉದ್ದೇಶದಲ್ಲಿ ಭೇದವಿರುವು ದಿಲ್ಲ. ಅಂತಹ ದೇವರೊಂದರ ಮೇಲಿನ ಆಕಾರವನ್ನು ನೋಡಿ ಆತನು ಇಂಥಹ ಎಂದು ಮನುಷ್ಯ ನಿರ್ಣಯಿಸಲಾರನು, ಗುರುತಿಸಲಾರನು.

ವಿಶ್ವಕ್ಕೆಲ್ಲ ಆದಿಕರ್ತನಾದ ದೇವರು, ಮನುಷ್ಯರಿಗಾಗಿ ಮನುಷ್ಯನಾಗಿ ಬಂದು ಎಷ್ಟೋಸಲ ಬಂದುಹೋಗಿದ್ದಾನೆ. ಅಷ್ಟೇ ಅಲ್ಲದೆ ಮತ್ತೆಮತ್ತೆ ಬರುತ್ತೇನೆಂದು ಕೂಡ ಹೇಳಿಹೋಗಿದ್ದಾನೆ. ಇದನ್ನನುಸರಿಸಿ ಧರ್ಮ ಸಂಸ್ಥಾಪನಾರ್ಥ ಆತನು ಎಷ್ಟುಸಲವಾದರೂ ಬರಬಹುದೆಂದು ತಿಳಿಯುತ್ತಿದೆ. ಹಾಗಿರುವಾಗ ಒಬ್ಬ ಭಗವಂತನನ್ನು ದೇವರೆಂದು ನಂಬಿ, ಪ್ರಭುವನ್ನು ದೇವರು ಅಲ್ಲ ಎಂದು ಹೇಳಬಹುದಾ! ಹಾಗೆಯೇ ಪ್ರಭುವನ್ನೇ ದೇವರೆಂದು ಹೇಳಿ, ಭಗವಂತನನ್ನು ದೇವರು ಅಲ್ಲವೆಂದು ಹೇಳಬಹುದಾ! ಹಾಗೆ ಹೇಳುವುದಕ್ಕೆ ನಿರ್ದಿಷ್ಟವಾದ ಆಧಾರವಿಲ್ಲ. ದೇವರ ಜ್ಞಾನ ಸಂಪೂರ್ಣವಾಗಿ ತಿಳಿಯದಿರುವಾಗ ದೇವರ ಜನ್ಮಗಳನ್ನು ಗುರುತಿಸಲಾರದೆ, ಬಾಹ್ಯಸಂಬಂಧವಾದ ಆಚಾರವನ್ನು, ಮತಗಳನ್ನು ಅಡ್ಡ ಇಟ್ಟುಕೊಂಡು, ನನ್ನದು ಇಂತಹ ಮತವೆಂದು, ನನ್ನ ದೇವರು ಇಂತಹವನೆಂದು ಹೇಳಿಕೊಳ್ಳುತ್ತಿದ್ದೇವೆ. ಸರ್ವ ಪ್ರಪಂಚಕ್ಕೂ ಸರ್ವ ಜಗತಿಗು ಇರುವುದು ಒಂದೇ ದೇವರೇ, ಆ ದೇವರೇ ಇಸ್ಲಾಮ್, ಇಂದೂ, ಕ್ರೈಸ್ತ ಮತಗಳಲ್ಲಿ ಪ್ರಕಟಿಸಲ್ಪಟ್ಟಿದ್ದಾನೆ. ಎಷ್ಟು ಮತಗಳಲ್ಲಿ ಹೇಳಲ್ಪಟ್ಟರೂ, ಎಲ್ಲಾ ಮತಗಳಿಗು ಅತೀತವಾಗಿ ಇರುವವನು ದೇವರು. ಮತಗಳು ದೇವರನ್ನು ತಿಳಿಸುವ ಮಾರ್ಗಗಳೇ, ಆದರೆ ಮತ ದೇವರಲ್ಲ. ಮತ ಮನುಷ್ಯ ಹುಟ್ಟಿನಿಂದ

ಬರಲಿಲ್ಲ. ಮನುಷ್ಯ ಸ್ವಲ್ಪ ಬೆಳೆದ ನಂತರ ನಾನು ಇಂತಹ ಮತಸ್ಥನೆಂದು ಅಂದುಕೊಳ್ಳುತ್ತಿದ್ದಾನೆ. ಮನುಷ್ಯ ಹುಟ್ಟಿದ ಕುಟುಂಬವನ್ನು ನೋಡಿ ಸ್ವಲ್ಪ ವಯಸ್ಸು ಬಂದ ನಂತರ ತಿಳಿಯಲಾದ ಮತವೇ ತನ್ನದೆಂದು ನಂಬಿ, ತನ್ನ ಮತದಲ್ಲಿ ಹೇಳಲ್ಪಟ್ಟವನೇ ದೇವರೆಂದು, ಇತರ ಮತಗಳು ಸರಿಯಾದವು ಅಲ್ಲವೆಂದು, ತನ್ನ ಮತವೇ ಸರಿಯಾದುದೆಂದು ಹೇಳಿಕೊಳ್ಳುತ್ತಿದ್ದಾರೆ. ವಿಶ್ವವೆಲ್ಲದಕ್ಕು ದೊಡ್ಡವನಾದ ದೇವರನ್ನು ಒಂದು ಮತದವರು ಒಂದು ವಿಧವಾಗಿ, ಮತ್ತೊಂದು ಮತದವರು ಮತ್ತೊಂದು ವಿಧವಾಗಿ ಹೇಗೆ ಅಂದುಕೊಳ್ಳುತ್ತಿದ್ದಾರೋ ಚಿಕ್ಕ ಕಥೆಯನ್ನು ಉದಾಹರಣೆಯಾಗಿ ನೋಡೋಣ.

ಒಂದು ಊರಿನಲ್ಲಿ ಅವಳಿಜವಳಿಯಾದ ಅನಾಥ ಬಾಲಕರಿದ್ದರು. ತಾವು ಅವಳಿಜವಳಿಗಳೆನ್ನುವ ವಿಷಯ ಕೂಡ ಅವರಿಗೆ ತಿಳಿದಿಲ್ಲ. ಅವರು ಸ್ವಲ್ಪ ಬೆಳೆದು ದೊಡ್ಡವನಾದ ನಂತರ ನಮ್ಮ ತಂದೆ, ತಾಯಿ ಯಾರೆಂಬ ಪ್ರಶ್ನೆ ಅವರ ಊಹೆಗೆ ಬಂದಿದೆ. ಆ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಳ್ಳಬೇಕೆಂದು, ತಮ್ಮ ತಾಯಿ ತಂದೆಯರು ಇಂತಹವರೆಂದು ಇತರರಿಗೆ ಹೇಳಬೇಕೆಂಬ ಆಕಾಂಕ್ಷೆ ಅವರಲ್ಲಿ ಬೆಳೆದಿದೆ. ಯಾರು ತಮ್ಮ ಮಾತಾ ಪಿತರ ಆಚೂಕಿ ಹೇಳುತ್ತಾರೆಂದು ಹುಡಿಕಿದ್ದಾರೆ. ಈ ವಿಧವಾದ ಅವರ ಅನ್ವೇಷಣೆಯಲ್ಲಿ ದೊಡ್ಡವನಿಗೆ ಒಬ್ಬ ವೃದ್ಧನು ಕಾಣಿಸಿ, ನಿಮ್ಮ ತಾಯಿ ತಂದೆಯರೊಂದರ ವಿವರ ನಮಗೆ ಮಾತ್ರ ತಿಳಿದಿದೆ ಎಂದು ಹೇಳಿದ್ದಾನೆ. ಆ ಮಾತು ಕೇಳಿದ ತಕ್ಷಣ ಆ ವೃದ್ಧನನ್ನು ಆಶ್ರಯಿಸಿ ತನ್ನ ತಾಯಿ ತಂದೆಯ ವಿವರವನ್ನುತಿಳಿಸೆಂದನು. ಅದಕ್ಕೆ ಆ ವೃದ್ಧನು ನಾನು ಹೇಳಿದಂತೆ ನಡೆದುಕೊಂಡರೆ ನಿನಗೆ ಆ ವಿಷಯವನ್ನು ಹೇಳುತ್ತೇನೆಂದಿದ್ದಾನೆ. ಅದಕ್ಕೆ ಹಾಗೆಯೇ ಕೇಳುತ್ತೇನೆಂದು ಆ ಬಾಲಕನು ಒಪ್ಪಿಕೊಂಡಿದ್ದಾನೆ. ಕಷ್ಟಪಟ್ಟರೆ ತಿಳಿದುಕೊಳ್ಳುವ ವಿಷಯಕ್ಕೆ ಬೆಲೆ ಇರುತ್ತದೆಂದು ತಿಳಿದ ವೃದ್ಧನು, ತನಗೆ ಇಷ್ಟಬಂದ ನಿಯಮಗಳನ್ನು ಕೆಲವನ್ನು ಹೇಳಿ, ಇವುಗಳ ಪ್ರಕಾರ ನಡೆದುಕೊಂಡಾಗಲೇ ನಿನಗೆ ನಿನ್ನ ತಾಯಿತಂದೆಯ ವಿಷಯ ತಿಳಿಸುತ್ತೇನೆಂದಿದ್ದಾನೆ. ಅವನಿಗೆ ಎಷ್ಟು ಶ್ರದ್ಧೆ ಇದೆಯೋ ಎಂದು ತಿಳಿಸುವುದಕ್ಕೆ ಆ ವೃದ್ಧನು

ಕೆಲವು ನಿಯಮಗಳನ್ನಿಟ್ಟಿದ್ದಾನೆ. ಬೋಡು ಮಾಡಿಸಿಕೊ, ಜುಟ್ಟು ಇಟ್ಟುಕೊ ಎಂದಿದ್ದಾನೆ, ಹಣೆ ಮೇಲೆ ಬೊಟ್ಟಿಟ್ಟುಕೊ ಎಂದಿದ್ದಾನೆ. ಕೆಳಗಿನವರೆಗು ಪಂಚೆಕಟ್ಟಿಕೊಳ್ಳಿ ಎಂದಿದ್ದಾನೆ. ಯಾವುದೋ ಒಂದು ಮಂತ್ರವನ್ನು ಹೇಳಿ ಅದನ್ನು ಉಚ್ಛರಿಸೆಂದಿದ್ದಾನೆ. ಹೀಗೆ ಎಷ್ಟೋ ನಿಯಮಗಳನ್ನು ತನಕಿಷ್ಟ ಬಂದಹಾಗೆ ಹೇಳಿದ್ದಾನೆ. ವಾಸ್ತವವಾಗಿ ಅವನ ತಾಯಿತಂದೆಯರಿಗು, ಆ ನಿಯಮಗಳಿಗು ಯಾವ ಸಂಬಂಧವೂ ಇಲ್ಲ. ಅವನಲ್ಲಿನ ಶ್ರದ್ಧೆಯನ್ನು ತಿಳಿಸುವುದಕ್ಕೆ ಆ ವಿಧವಾಗಿ ಹೇಳಿದ್ದಾನೆ. ಈ ವಿಧವಾಗಿ ನನ್ನ ಮಾತಿನ ಪ್ರಕಾರ ಆಚರಿಸುತ್ತಿದ್ದರೆ. ನೀನು ನನ್ನ ಮಾತು ಕೇಳಿದ್ದೀಯಾ ಎಂದು ನನಗೆ ನಂಬಿಕೆ ಉಂಟಾದಾಗ ನಿನಗೆ ನಿನ್ನ ತಂದೆಯನ್ನು ತಿಳಿಸುತ್ತೇನೆಂದಿದ್ದಾನೆ. ಆ ಮುದುಕನು ಹೇಳಿದಂತೆ ಆ ಬಾಲಕನು ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದನು.

ಈ ವಿಷಯವೆಲ್ಲಾ ತಿಳಿದುಕೊಂಡ ಎರಡನೆಯವನು ತಾನುಕೂಡ ತನ್ನ ತಾಯಿ ತಂದೆಯರನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದಾನೆ. ಆದ್ದರಿಂದ ಆತನು ಕೂಡ ಆ ವೃದ್ಧನನ್ನು ಸಮೀಪಿಸಿ ತನಗೂ ಸಹ ತನ್ನೊಂದರ ಮಾತಾಪಿತರನ್ನು ತಿಳಿದುಕೊಳ್ಳಬೇಕೆಂಬ ಆಸೆ ಇದೆಯೆಂದು, ತಪ್ಪದೆ ತಾಯಿತಂದೆಯರನ್ನು ಕುರಿತು ತಿಳಿಸಿರೆಂದು ಕೋರಿದ್ದಾನೆ. ಆಗ ಆ ಮುದುಕನು ಮೊದಲನೆಯವನಿಗೆ ಹೇಳಿದಂತೆ ತಾನು ಹೇಳುವ ನಿಯಮಗಳ ಪ್ರಕಾರ ನಡೆದುಕೊಂಡರೆ ತಪ್ಪದೆ ತಿಳಿಸುತ್ತೇನೆಂದಿದ್ದಾನೆ. ಮೊದಲನೆಯವನಿಗೆ ತನಗೆ ಇಷ್ಟಬಂದ ನಿಯಮಗಳನ್ನು ಹೇಳಿದ ವೃದ್ಧನು, ಎರಡನೆಯವನಿಗು ಸಹ ಆಗ ತನ್ನ ಮನಸ್ಸಿಗೆ ತೋಚಿದ ನಿಯಮಗಳನ್ನು ಹೇಳಿದ್ದಾನೆ. ಮೊದಲನೆಯವನಿಗೆ ಹೇಳಿದ ನಿಯಮಗಳಿಗು, ಎರಡನೆಯವನಿಗೆ ಹೇಳಿದ ನಿಯಮಗಳಿಗು ಬಹಳ ವ್ಯತ್ಯಾಸ ಇತ್ತು. ನನ್ನ ಮಾತು ಕೇಳುತ್ತಾರೊ ಇಲ್ಲವೊ ಎಂದು ಅವರನ್ನು ತನ್ನ ಮಾತುಕೇಳುವಂತೆ ಮಾಡಿಕೊಳ್ಳುವುದಕ್ಕೆ, ಅವರಿಗೆ ಅವರ ತಾಯಿ ತಂದೆಯರ ಮೇಲೆ ಶ್ರದ್ಧೆಯನ್ನು ಹೆಚ್ಚಿಸುವುದಕ್ಕೆ ನಿಯಮಗಳನ್ನು ಪಾಲಿಸಬೇಕೆಂದಿದ್ದಾನೆ. ಆದರೆ ಅವುಗಳಿಗೂ ತಾಯಿ ತಂದೆಯರಿಗೂ ಯಾವ ಸಂಬಂಧವೂ ಇಲ್ಲ.

ಹೇಳಲಾದ ನಿಯಯಗಳೆಲ್ಲವು ಮುದುಕನಿಗೆ ಸಂಬಂಧಿಸಿರುವವೇ ಎಂದು ತಿಳಿಯಬೇಕು. ಆ ಇಬ್ಬರು ಅವಳಿಜವಳಿ ಮಕ್ಕಳಿಗೆ ತಂದೆ ಒಬ್ಬನೇ ಆದರೂ, ಅವರು ಆಚರಿಸಬೇಕಾದ ನಿಯಮಗಳು ಬೇರೆಬೇರೆಯಾಗಿ ಇವೆ. ಮೊದಲನೆಯ ವನಿಗೆ ಬೋಡು ಮಾಡಿಸಿಕೊಂಡು ಜುಟ್ಟು ಇಟ್ಟಿಕೊ ಎಂದು ಹೇಳಿದರೆ, ಎರಡನೆಯವನಿಗೆ ಜುಟ್ಟು ಇರಬಾರದೆಂದಿದ್ದಾನೆ. ಮೊದಲನೆಯವನಿಗೆ ಹಣೆಯ ಮೇಲೆ ಬೊಟ್ಟಿಟ್ಟುಕೊ ಎಂದರೆ, ಎರಡನೆಯವನಿಗೆ ಮುಖದ ಮೇಲೆ ಯಾವ ಗುರುತೂ (ಬೊಟ್ಟು) ಇರಬಾರದೆಂದಿದ್ದಾನೆ. ಮೊದಲನೆಯವನಿಗೆ ಉತ್ತರಕ್ಕೆ ತಿರುಗಿ ಮುಗಿಯೆಂದು ಹೇಳಿದರೆ ಎರಡನೆಯವನಿಗೆ ದಕ್ಷಿಣಕ್ಕೆ ತಿರುಗಿ ಮುಗಿಯೆಂದಿದ್ದಾನೆ. ಹೀಗೆ ಹೇಳಲಾದ ನಿಯಮಗಳೆಲ್ಲವು ಮೊದಲನೆಯವನಿಗೂ ಎರಡನೆಯವನಿಗೂ ಎಷ್ಟೋ ವ್ಯತ್ಯಾಸ ಹೊಂದಿವೆ. ಅವರಿಬ್ಬರು ವೃದ್ಧನು ಹೇಳಿದ ಮಾತಿನ ಪ್ರಕಾರ ಯಾರ ನಿಯಮಗಳನ್ನು ಅವರು ಶ್ರದ್ಧೆಯಿಂದ ಆಚರಿಸುತ್ತಿದ್ದರು.

ಅವರ ಶ್ರದ್ಧೆಯನ್ನು ಗಮನಿಸಿದ ಮುದುಕನು ಅವರ ತಾಯಿ ತಂದೆಯರನ್ನು ಕುರಿತು ತಿಳಿಸಬೇಕೆಂದುಕೊಂಡಿದ್ದಾನೆ. ಒಂದುದಿನ ಸಾಯಂಕಾಲ ಮೊದಲನೆಯವನನ್ನು ಕರೆದು, ನಿನ್ನ ತಂದೆಯನ್ನು ತೋರಿಸುತ್ತೇನೆಂದು ಒಂದು ಪ್ರಾಂತ್ಯಕ್ಕೆ ತೆಗೆದುಕೊಂಡುಹೋಗಿ, ನಿಜವಾಗಲೂ ಅವರ ತಂದೆಯನ್ನು ತೋರಿಸಿದ್ದಾನೆ. ಅವಳಿಜವಳಿ ಮಕ್ಕಳಲ್ಲಿ ಮೊದಲನೆಯವನು ತನ್ನ ತಂದೆಯನ್ನು ಎದುರಾಗಿ ನೋಡಿದ್ದಾನೆ. ತಂದೆಯನ್ನು ಮುಂದುಗಡೆಯಿಂದ ನೋಡಿರುವುದರಿಂದ ಅವನಿಗೆ ತಂದೆ ಮುಖದಲ್ಲಿನ ಭಾಗಗಳೆಲ್ಲ ಕಾಣಿಸಿವೆ. ತಂದೆ ಮುಖದಲ್ಲಿನ ಕಣ್ಣುಗಳು, ಮೂಗು ಎಲ್ಲವೂ ಸುಂದರವಾಗಿ ಕಾಣಿಸಿವೆ. ತಂದೆಯನ್ನು ನೋಡಿದ ಆತನಿಗೆ ತಂದೆಯ ಹೆಸರು ತಿಳಿದಿಲ್ಲ. ತಂದೆಯ ಹೆಸರು ತಾನು ಕೇಳಿದರೂ ಆ ಮುದುಕನು ಹೇಳಲಿಲ್ಲ. ತನಗೆ ತಿಳಿದ ಗುರುತುಗಳನ್ನನುಸರಿಸಿ ತಂದೆಗೆ ಒಂದು ಗುರುತಿನ ಹೆಸರು ಇಟ್ಟುಕೊಂಡಿದ್ದಾನೆ. ತಂದೆಯ ಮುಖದಲ್ಲಿ ಮೂಗು ಸುಂದರವಾಗಿ ಇರುವುದರಿಂದ ತನ್ನ ತಂದೆಯನ್ನು "ಮೂಗಿನವನು" ಎಂದು ತಿಳಿದುಕೊಂಡಿದ್ದಾನೆ. ಆ ವಿಷಯವನ್ನೇ

ನನ್ನ ತಂದೆ ಮುಗಿನವನೆಂದು ಪ್ರಚಾರ ಮಾಡಿಕೊಂಡಿದ್ದಾನೆ. ಸ್ವಲ್ಪಕಾಲಕ್ಕೆ ಎರಡನೆಯವನಿಗು ಕೂಡ ತಂದೆಯನ್ನು ತೋರಿಸಬೇಕೆಂದುಕೊಂಡ ವೃದ್ಧನು, ಎರಡನೆಯವನನ್ನು ಒಂದು ದಿನ ಉದಯವೇ ಕರೆದುಕೊಂಡು ಹೋಗಿ, ಒಂದು ಪ್ರದೇಶದಲ್ಲಿ ಅವನ ತಂದೆಯನ್ನು ತೋರಿಸಿದ್ದಾನೆ. ಮೊದಲನೆಯವನಿಗೆ ಮುಂದುಗಡೆಯಿಂದ ತೋರಿಸಿದ ವೃದ್ಧನು, ಎರಡನೆಯವನಿಗೆ ಹಿಂದಿನಿಂದ ತೋರಿಸಿದ್ದಾನೆ. ತಂದೆಯನ್ನು ಹಿಂದಿನಿಂದ ನೋಡಿದ ಎರಡನೆಯವನಿಗೆ ತಂದೆಯ ಹಿಂದಿನ ಭಾಗ ಮಾತ್ರ ಕಾಣಿಸಿದೆ. ತಲೆ ಹಿಂದೆ ಸುಂದರವಾದ ಉದ್ದವಾದ ಜುಟ್ಟು ಕಾಣಿಸಿದೆ. ಎರಡನೆಯವನು ಅದನ್ನೇ ಚೆನ್ನಾಗಿ ಗುರುತು ಇಟ್ಟುಕೊಂಡಿದ್ದಾನೆ. ತಾನು ನೋಡಿರುವುದನ್ನು ಅನುಸರಿಸಿ ತನ್ನ ತಂದೆಯನ್ನು "ಜುಟ್ಟಿನವನು" ಎಂದು ಗುರುತಿಸಿಕೊಂಡಿದ್ದಾನೆ. ಮೊದಲನೆಯವನು, ಎರಡನೆಯವನು ಇಬ್ಬರೂ ಅವಳಿಜವಳಿ ಮಕ್ಕಳಾಗಿರುವುದರಿಂದ ಇಬ್ಬರಿಗೂ ತಂದೆ ಒಬ್ಬನೇ. ಆ ಒಬ್ಬನನ್ನೇ ವೃದ್ಧನು ಇಬ್ಬರಿಗು ತೋರಿಸಿದ್ದಾನೆ. ಆದರೆ ತೋರಿಸಿರುವುದು ಒಬ್ಬ ತಂದೆಯನ್ನೇ ಆದರೂ, ತೋರಿಸಿದ ಸಮಯಗಳು ಬೇರೆ, ದಿಶೆಗಳು ಬೇರೆ.

ನೋಡಿರುವುದು ಒಬ್ಬನನ್ನೇ ಆದರೂ, ಆ ಒಬ್ಬನಿಗೆ ಎರಡು ಹೆಸರುಗಳು ಬಂದಿವೆ. ಮೊದಲನೆಯವನು ತನ್ನ ತಂದೆಯನ್ನು ಮುಗಿನವನು ಎಂದೂ, ಎರಡನೆಯವನು ತನ್ನ ತಂದೆಯನ್ನು ಜುಟ್ಟಿನವನು ಎಂದೂ ಹೇಳಿಕೊಳ್ಳುತ್ತಿದ್ದರು. ಒಂದುದಿನ ಆ ಇಬ್ಬರು ಒಬ್ಬರಿಗೊಬ್ಬರು ಬೇಟಿಯಾದಾಗ, ಮೊದಲನೆಯವನು ನಾನು ತಂದೆಯನ್ನು ನೋಡಿದ್ದೇನೆ ಎಂದನಂತೆ. ತಕ್ಷಣ ಎರಡನೆಯವನು ನಾನು ಕೂಡ ನೋಡಿದ್ದೇನೆ ಎಂದನಂತೆ. ಹೇಗಿದ್ದಾನೆಂದು ಮೊದಲನೆಯವನು ಕೇಳಿದ್ದಾನೆ. ಆಗ ಎರಡನೆಯವನು ನೋಡಿದ ಪ್ರಕಾರ ಸುಂದರವಾದ ಜುಟ್ಟಿರುವ ಜುಟ್ಟಿನವನು ನನ್ನ ತಂದೆ ಎಂದು ಹೇಳಿದ್ದಾನೆ. ಮೊದಲನೆಯವನು ನನ್ನ ತಂದೆ ಸುಂದರವಾದ ಮೂಗಿರುವ ಮುಗಿನವನು ಎಂದನಂತೆ. ಈ ರೀತಿಯಾಗಿ ಅವರು ಒಬ್ಬರ ತಂದೆ ಜುಟ್ಟಿನವನೆಂದು, ಮತ್ತೊಬ್ಬರ ತಂದೆ ಮೂಗಿನವನೆಂದು

ಹೇಳಿಕೊಂಡಿದ್ದಾರೆ. ಆದರೆ ನೋಡಿರುವುದು ಒಬ್ಬನನ್ನೇಯೆಂದು, ಇಬ್ಬರಿಗೂ ಒಬ್ಬನೇ ತಂದೆ ಎಂದು ಅವರಿಗೆ ತಿಳಿಯದೆ ಹೋಗಿದೆ. ಅಲ್ಲಿಗೆ ಅವರು ಸುಮ್ಮನಿರದೆ ಮೊದಲನೆಯವನು ಎರಡನೆಯವನನ್ನು ನೋಡಿ, ನಿನ್ನ ತಂದೆ ಜುಟ್ಟಿನವನಿಗಿಂತ ನನ್ನ ತಂದೆ ಮುಗಿನವನು ಉತ್ತಮನು ಎಂದನಂತೆ. ತಕ್ಷಣವೇ ಎರಡನೆಯವನು ಸ್ಪಂದಿಸಿ ನಿನ್ನ ತಂದೆ ಮೂಗಿನವನಿಗಿಂತ ನನ್ನ ತಂದೆ ಜುಟ್ಟಿನವನೇ ಉತ್ತಮನೆಂದು ಗಟ್ಟಿಯಾಗಿ ಹೇಳಿದ್ದಾನೆ. ಈ ವಿಧವಾಗಿ ನಮ್ಮ ತಂದೆ ಉತ್ತಮನು, ನಮ್ಮ ತಂದೆ ಉತ್ತಮನು ಎಂದು ವಾದನೆಗು ಕೂಡ ಇಳಿದಿದ್ದಾರೆ. ಈ ವಾದನೆ ಹೆಚ್ಚಾಗುತ್ತಾಹೋಗಿ ಕೊನೆಗೆ ಒಬ್ಬರನ್ನೊಬ್ಬರು ಹೊಡೆದುಕೊಳ್ಳುವವರೆಗು ಹೋಗಿದೆ. ಅಲ್ಲಿಗೆ ಸುಮ್ಮನಾಗದೆ ಒಬ್ಬರಿಗೊಬ್ಬರು ಸಾಯಿಸಿಕೊಳ್ಳುವವರೆಗು ಹೋಗಿದೆ. ಈ ವಿಷಮಪರಿಣಾಮವನ್ನು ಗ್ರಹಿಸಿದ ವೃದ್ಧನು ಇಬ್ಬರನ್ನು ಸೇರಿಸಿ ನಿಮ್ಮ ಇಬ್ಬರಿಗೂ ತಂದೆ ಒಬ್ಬನೇ ಎಂದು, ಒಬ್ಬರು ಮುಂದಿನಿಂದ, ಒಬ್ಬರು ಹಿಂದಿನಿಂದ ನೋಡಿರುವುದರಿಂದ ಕಾಣಿಸಿದ ರೂಪವನ್ನು ನೋಡಿ ನೀವು ಹಾಗೆ ವಾದಿಸುತ್ತಿದ್ದೀರೆಂದು ಹೇಳಿದರೂ ಅವರು ಕೇಳಲಿಲ್ಲ.

ಮುದುಕನು ಆ ಇಬ್ಬರಿಗೂ ಹೊಡೆದಾಟ ಇಡಬೇಕೆಂಬ ಉದ್ದೇಶದಿಂದ ಒಬ್ಬರಿಗೆ ಮುಂದಿನಿಂದ ಒಬ್ಬರಿಗೆ ಹಿಂದಿನಿಂದ ತೋರಿಸಲಿಲ್ಲ. ಆ ದಿನ ಅವರಿಗೆ ಹಾಗೆ ತೋರಿಸುವುದಕ್ಕೆ ಕಾರಣವಿದೆ. ಅವರ ತಂದೆ ಬಹಳಕಾಲದಿಂದ ಒಂದು ಅರಳಿ ಮರದ ಟೊಳ್ಳೆಯಲ್ಲಿ ಕುಳಿತು ತಪಸ್ಸು ಮಾಡಿಕೊಳ್ಳುತ್ತಾ ಹೊರಗಿನ ಗಮನವಿಲ್ಲದೆ ಇದ್ದನು. ಮರದ ಟೊಳ್ಳೆಯಲ್ಲಿ ಕುಳಿತುಕೊಂಡ ಆತನು ಆರು ತಿಂಗಳು ಮುಖವನ್ನು ಹೊರಗಡೆಗೆ ಇಟ್ಟು, ಮತ್ತೊಂದು ಆರು ತಿಂಗಳು ಮುಖವನ್ನು ಒಳಗಡೆಗಿಟ್ಟು ಕುಳಿತುಕೊಳ್ಳುತ್ತಿದ್ದನು. ಮೊದಲನೆಯವನನ್ನು ಕರೆದುಕೊಂಡು ಹೋದಾಗ ಟೊಳ್ಳೆಯಲ್ಲಿರುವ ಅವನ ತಂದೆಯ ಮುಖವನ್ನು ಹೊರಗಿಟ್ಟು ಕುಳಿತುಕೊಂಡಿರುವುದರಿಂದ ಅವನಿಗೆ ಮುಖವೇ ಕಾಣಿಸಿದೆ. ಮೊದಲು ಅವನು ಅದನ್ನೇ ಅಸಲು ರೂಪವೆಂದುಕೊಂಡಿದ್ದಾನೆ. ನಂತರ

ಸ್ವಲ್ಪಕಾಲಕ್ಕೆ ಎರಡನೆಯವನನ್ನು ಕರೆದುಕೊಂಡು ಹೋದಾಗ ಅವನ ತಂದೆ ಒಳಗಡೆಗೆ ತಿರುಗಿ ಕುಳಿತುಕೊಂಡಿದ್ದಾನೆ. ಆದ್ದರಿಂದ ಅವನಿಗೆ ತಿಳಿದಿರುವುದು ತಲೆಜುಟ್ಟು ಮಾತ್ರವೇ, ಅದೇ ನಿಜವಾದ ರೂಪವೆಂದು ಅವನಂದುಕೊಂಡಿದ್ದಾನೆ. ಇಬ್ಬರೂ ತಂದೆಯೊಂದರ ಪೂರ್ತಿ ರೂಪವನ್ನು ನೋಡಲಿಲ್ಲ. ಇಬ್ಬರೂ ಒಬ್ಬನನ್ನೇ ಸ್ವಲ್ಪ ನೋಡಿದವರಾದರೂ ನಾವೆಲ್ಲವೂ ನೋಡಿದ್ದೇವೆಂದು, ನಾವೆಲ್ಲ ತಿಳಿದಿದ್ದೇವೆ ಎಂದುಕೊಳ್ಳುವುದರಿಂದ ಭೇದಾಭಿಪ್ರಾಯಗಳು ಬಂದಿವೆ. ನಿಜಕ್ಕೆ ಯಾರಿಗೂ ತಮ್ಮ ತಂದೆಯೊಂದರ ಸಂಪೂರ್ಣ ಆಕಾರ ತಿಳಿದಿಲ್ಲ. ಸಹನೆಯಿಂದ ವರ್ಷದ ನಂತರ ಎರಡೂ ಕಡೆ ತಿರುಗಿ ಕುಳಿತುಕೊಂಡಾಗ ನೋಡಿದ್ದರೆ ಇಬ್ಬರ ಸಂಶಯಗಳು ತೀರಿಹೋಗುತ್ತಿದ್ದವು. ಅಷ್ಟೇ ಅಲ್ಲದೆ ಸ್ವಲ್ಪ ಕಾಲವಿದ್ದು ಸತ್ಯಾಸತ್ಯಗಳು ತಿಳಿದುಕೊಳ್ಳದೆ, ತಿಳಿದಿರುವುದು ಸ್ವಲ್ಪವೇ ಆದರೂ ಎಲ್ಲಾ ತಿಳಿದಂತೆ ಭ್ರಮಿಸಿದರೆ ನಡೆಯುವವು ಅನರ್ಥಗಳೇ.

ಈ ಕಾಲದಲ್ಲಿ ಒಂದೇ ಸೃಷ್ಟಿಯಲ್ಲಿ ಒಂದೇಸಲ ಹುಟ್ಟಿದ ಅವಳಿಜವಳಿ ಮಕ್ಕಳಂತಹ ಮಾನವರು ಭೂಮಿಮೇಲೆ ಇದ್ದಾರೆ. ಎಲ್ಲಾ ಜೀವರಾಶಿಗಳಿಗು ತಂದೆ ಪರಮಾತ್ಮಯೆಂದು ವೃದ್ಧನಂತಹ ಮತಗಳು ಬೋಧಿಸುತ್ತಿವೆ. ಮತವು ಒಬ್ಬ ದೇವರನ್ನೇ ತೋರಿಸುತ್ತಿದ್ದರೂ (ಬೋಧಿಸುತ್ತಿದ್ದರೂ) ಬೋಧಿಸಿದ ಕಾಲವನ್ನನುಸರಿಸಿ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ದೇವರು ಅರ್ಥವಾಗಿದ್ದಾನೆ. ಅರ್ಥವಾಗಿರುವುದರ ಪ್ರಕಾರ ನಮ್ಮ ದೇವರು ದೊಡ್ಡವನು ಎಂದು ಅಂದುಕೊಳ್ಳುವುದು ನಡೆಯುತ್ತಿದೆ. ನಾವು ತಿಳಿದುಕೊಂಡಿರುವುದರಲ್ಲಿ ಲೋಪವೇನಾದರು ಇದೆಯೇನೊ ಎಂದು ಯಾರೂ ಅಂದುಕೊಳ್ಳುತ್ತಿಲ್ಲ. ದೇವರನ್ನು ಒಂದು ಮತದಕಡೆಯಿಂದ ನೋಡಿದರೆ ಈ ವಿಧವಾಗಿ ಅರ್ಥ ವಾಗಿದ್ದಾನೆ, ಮತ್ತೊಂದು ಕಡೆಯಿಂದ ನೋಡಿದಾಗ ಯಾವ ವಿಧವಾಗಿ ಅರ್ಥವಾಗುತ್ತಾನೋ ಎಂದು ಯೋಚಿಸುತ್ತಿಲ್ಲ ಎಲ್ಲ ಮತಗಳ ಗುರಿ, ಎಲ್ಲಾ ಮತಗಳು ತೋರಿಸುವುದು ಒಬ್ಬ ದೇವರನ್ನೇ ಎನ್ನುವ ವಿಷಯ ತಿಳಿಯುತ್ತಿಲ್ಲ. ಹಾಗೆ ತಿಳಿಯದವರು ತಮ್ಮ ಮತದಕಡೆಯಿಂದ ತಮಗೆ ತಿಳಿದ ಪದ್ಧತಿ ಪ್ರಕಾರ,

ದೇವರ ಮೇಲೆ ತಮ್ಮ ವಿಶ್ವಾಸವನ್ನು ದೊಡ್ಡದಾಗಿಟ್ಟುಕೊಂಡು, ದೇವರನ್ನು ದೊಡ್ಡದಾಗಿ ಹೊಗಳುತ್ತಿದ್ದಾರೆ. ತನ್ನದಾಗದ ಇತರ ಮತದ ಮೇಲೆ ದ್ವೇಷ ಉಂಟಾದವರಾಗಿ, ಆ ಮತ ತಿಳಿಸುವ ದೇವರ ಮೇಲೆ ವಿಶ್ವಾಸ ಇಲ್ಲದವರಾಗಿ, ಆ ಮತ ದೇವರನ್ನು ಹೆಚ್ಚಾಗಿ ದ್ವೇಷಿಸುತ್ತಿದ್ದಾರೆ. ಈ ವಿಧವಾಗಿ ಎಲ್ಲಾ ಮತಗಳಿಗು ದೇವರಾದವನನ್ನು ನೀನು ಆರಾಧಿಸುವ ನಿನ್ನ ದೇವರನ್ನು, ಮುಂದುಗಡೆಯಿಂದ ಹೊಗಳುತ್ತಿದ್ದೀಯಾ ಹಿಂದುಗಡೆಯಿಂದ ಬೈಯುತ್ತಿದ್ದೀಯಾ. ಇದು ಹೇಗಿದೆ ಎಂದರೇ ದೇವರ ಒಂದು ಕಡೆಯ ರೂಪಮಾತ್ರ ತಿಳಿದು ಆ ಕಡೆ ಶ್ರೀಗಂಧವನ್ನು ಹಚ್ಚುತ್ತಿದ್ದೀಯಾ, ಮತ್ತೊಂದು ಕಡೆ ರೂಪವನ್ನು ನೋಡಿ ಅಸೂಯೆಪಟ್ಟು ಸಗಣಿ ಹಚ್ಚುತ್ತಿದ್ದೀಯಾ. ಒಂದೇ ದೇವರನ್ನೇ ನೀನು ಆರಾಧಿಸುತ್ತಿದ್ದೀಯಾ ಮತ್ತು ನೀನೇ ದೂಷಿಸುತ್ತಿದ್ದೀಯಾ.

ಒಂದುವೇಳೆ ಸಂಪೂರ್ಣ ಜ್ಞಾನ ತಿಳಿದು, ಕಥೆಯಲ್ಲಿ ತಪ್ಪಾಗಿ ಅರ್ಥೈಸಿಕೊಂಡಂತೆ ಅರ್ಥೈಸಿಕೊಳ್ಳದೆ, ಮೂಗಿನವನು ಜುಟ್ಟಿನವನು ಬೇರೆಬೇರೆ ಎಂದುಕೊಳ್ಳದೆ, ಇಬ್ಬರೂ ಒಂದೇಯೆಂದು ತಿಳಿದು, ಐದುಸಾವಿರ ವರ್ಷಗಳ ಕೆಳಗೆ ತಿಳಿಯಲ್ಪಟ್ಟ ಕೃಷ್ಣನೂ, ಎರಡು ಸಾವಿರ ವರ್ಷಗಳ ಕೆಳಗೆ ತಿಳಿಯಲ್ಪಟ್ಟ ಪ್ರಭುವೂ ಇಬ್ಬರೂ ಒಂದೇಯೆಂದು ಯಾರಾದರೂ ಹೇಳಿದರೂ, ಕೇಳದ ಪರಿಸ್ಥಿತಿ ಇರುವುದಲ್ಲದೆ ಹೇಳಿರುವವನನ್ನು ಎರಡು ವರ್ಗದವರು, ಎರಡು ಮತದವರು ವಿಮರ್ಶಿಸಿ ಎರಡುಕಡೆಗಳಿಂದ ಆತಂಕಗಳನ್ನು ಉಂಟುಮಾಡುತ್ತಾರೆ. ಉದಾಹರಣೆಗೆ ನಮ್ಮ ಬೋಧನೆಗಳಿರುವ ಗ್ರಂಥಗಳಲ್ಲಿ ಎಲ್ಲಿಯಾದರೂ ಪ್ರಭುವು ಹೇಳಿದ ಬೋಧನೆಯಾಗಲಿ, ಪ್ರಭುವಿನ ಗೊಂಬೆಯನ್ನಾಗಲಿ ನೋಡಿದ ಹಿಂದೂಗಳು ಇದು ನಮಗೆ ಸರಿಹೋಗುವುದಿಲ್ಲ, ಇದು ನಮ್ಮ ಮತಕ್ಕೆ ಸಂಬಂಧಿಸಿರುವುದು ಅಲ್ಲವೆಂದು ಹೇಳುವುದಲ್ಲದೇ, ನಮಗೆ ಅನೇಕ ವಿಧಗಳ ಆತಂಕಗಳನ್ನು ಉಂಟುಮಾಡಿದ್ದಾರೆಂದು ಹೇಳುವುದು ತಪ್ಪುವುದಿಲ್ಲ. ಒಂದು ದಶೆಯಲ್ಲಿ ನಮಗೆ ಬೆಲೆಕೊಡದ ಹಿಂದೂಮತದಲ್ಲಿ ಇರುವುದಕ್ಕಿಂತ ಎಷ್ಟೋ ಕ್ರಮಶಿಕ್ಷಣೆ ಹೊಂದಿದ ಇಸ್ಲಾಂ ಮತದೊಳಗೆ ಹೋಗಬೇಕೆಂಬ ಆಲೋಚನೆ

ಕೂಡ ಬಂದಿದೆ. ಇನ್ನು ಕ್ರೈಸ್ತವಮತದಲ್ಲಿನವರು ನಮ್ಮ ಬೋಧನೆಗಳಲ್ಲಿ ಕೃಷ್ಣನೆಂದು ಹೆಸರು ಬಂದ ಗ್ರಂಥಗಳಲ್ಲಿ ಶ್ರೀಕೃಷ್ಣ ಗೊಂಬೆ ಇದ್ದರೂ ಇದು ನಮಗೆ ಸರಿಹೋಗುವುದಿಲ್ಲ. ನಮ್ಮ ಪ್ರಭುವು ಹೇಳಿರುವುದನ್ನು, ಪ್ರಭುವನ್ನು ಹೊರತು ಇತರರು ಹೇಳಿರುವುದನ್ನು ಕೇಳುವುದಿಲ್ಲ ಎನ್ನುತ್ತಿದ್ದಾರೆ. ಭಗವಂತನು (ಕೃಷ್ಣನು) ಪ್ರಭುವು ಇಬ್ಬರೂ ಒಂದೇ ಎಂದು ನಾವು ತಿಳಿಸಿದರೇ, ಎಷ್ಟು ಹುಚ್ಚನೆನ್ನುವಂತೆ ಹೀನಾತಿಹೀನವಾಗಿ ನೋಡುವ ಕ್ರೈಸ್ತರು, ಎಷ್ಟೋ ಅಜ್ಞಾನಿ ಎಂದು ದೂಷಿಸುವ ಹಿಂದೂಗಳು ಇದ್ದಾರೆ. ಅಲ್ಲಿಗೆ ಸುಮ್ಮನಿರದೆ ನಮ್ಮನ್ನು ಕೆಡಿಸುವುದಕ್ಕೆ ಈತನು ಬಂದಿದ್ದಾನೆನ್ನುತ್ತಾರೆ. ಯಾರೇನೆಂದರು ಯಾರ ಮುಖಾಂತರ ಯಾವ ಆತಂಕಗಳು ಎದುರಾದರು ನಮಗೆ ತಿಳಿಸಿದ ಸತ್ಯ **ಎಲ್ಲರಿಗೂ ದೇವರೊಬ್ಬನೇ,** ಆತನು ಯಾವ ರೂಪದಿಂದ, ಯಾವ ಹೆಸರಿನಿಂದ ಭೂಮಿಮೇಲಕ್ಕೆ ಬಂದರೂ ಆತನ ಬೋಧನೆ ಒಂದೇಯೆಂದು ಹೇಳುತ್ತಿದ್ದೇವೆ. ಕೇಳಿದರೆ ದೇವರ ವಾಸ್ತವಿಕತೆ ತಿಳಿಸುವುದಕ್ಕೆ ಹಿಂದೂ, ಇಸ್ಲಾಮ್, ಕ್ರೈಸ್ತರು ದೇವರ ವಿಷಯದಲ್ಲಿ ಯಾವ ಸಂಶಯವನ್ನು ಕೇಳಿದರೂ ವಿಶದವಾಗಿ ಉತ್ತರಕೊಡಬಲ್ಲೆವು. ಆದರೂ ಮತಗಳನ್ನು ಅಡ್ಡವಿಟ್ಟುಕೊಂಡು ದ್ವೇಷಿಸುವವರೇ ಹೊರತು, ಕೇಳಿ ವಿವರ ತಿಳಿದುಕೊಳ್ಳೋಣ ಎಂದುಕೊಳ್ಳುವವರು ಯಾರೂ ಕಾಣಿಸುತ್ತಿಲ್ಲ. **"ಶಿಲುಬೆ ದೇವರಾ?"** ಎನ್ನುವ ಹೆಸರಿರುವ ಈ ಗ್ರಂಥವನ್ನು ಪ್ರಭುವೊಂದರ ಮಹೋನ್ನತವನ್ನು ತಿಳಿಯುವಂತೆ ಬರೆಯುವುದೇ ಹೊರತು ಮತ್ಯಾವ ಉದ್ದೇಶವೂ ಇಲ್ಲ. ಪ್ರಭುವನ್ನು ಕುರಿತು ಬರೆದಿದ್ದಾನೆಂದು ಹಿಂದೂಗಳು, ಬರೆದವನು ಹಿಂದೂವೆಂದು ಕ್ರೈಸ್ತರು ನನ್ನ ಮೇಲೆ ಅಸೂಯೆಪಡದೆ ವಾಸ್ತವ ಜ್ಞಾನವನ್ನು ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ. ನಿಮಗೆ ತಿಳಿದಿದೆಯೊ ತಿಳಿದಿಲ್ಲವೊ ನಾನು ಎಲ್ಲಾ ಮತಗಳಿಗು ಸಂಬಂಧಿಸಿದ ಇಂದೂ (ಹಿಂದೂ). ಇಂದೂ ಮತದೊಳಗಿನವೇ ಎಲ್ಲ ಮತಗಳು, ಆದ್ದರಿಂದ ನಾನು ಎಲ್ಲ ಮತಗಳಿಗು ಸಂಬಂಧಿಸಿದವನು.

ಪರಮಾತ್ಮ, ಪರಲೋಕತಂದೆ, ಜಗನ್ನಾಥನು, ಪುರುಷೋತ್ತಮನಾದ ದೇವರು ತನ್ನ ವಿಷಯವನ್ನು ತಿಳಿಸುವುದಕ್ಕೆ ಭೂಮಿಮೇಲೆ ಬಂದಿರುವ

ಅವತಾರಗಳು ಎಷ್ಟು ಇವೆಯೊ ನಮಗೆ ತಿಳಿದಿಲ್ಲ. ಆದರೆ ತಿಳಿದಿರುವವು ಎರಡೇ ಎಂದು ಮೊದಲೇ ಹೇಳಿಕೊಂಡಿದ್ದೇವೆ. ದ್ವಾಪರಯುಗ ಅಂತ್ಯದಲ್ಲಿ ಶ್ರೀಕೃಷ್ಣನಾಗಿ ಜನ್ಮಿಸಿದ ದೇವರು ಕಲಿಯುಗ ಪ್ರಥಮದಲ್ಲಿ ಯೇಸುವಾಗಿ ಜನ್ಮಿಸಿದ್ದಾನೆ. ಕೃಷ್ಣನ ಜೀವನದ ಪ್ರವರ್ತನೆ ಯೇಸು ಜೀವನದ ಪ್ರವರ್ತನೆಗು ಎಷ್ಟೋ ವಿಭಿನ್ನ ವಾಗಿರುತ್ತದೆ. ಕೃಷ್ಣನ ಜೀವನದಲ್ಲಿ ಅಸತ್ಯಗಳು, ಅನ್ಯಾಯಗಳು, ಅಕ್ರಮ ಸಂಬಂಧಗಳು, ಬಹುಪತ್ನಿ ಲೋಲತ್ವವು, ಎಷ್ಟೋ ಜನರನ್ನು ಹತ್ಯೆ ಮಾಡಿಸುವುದು ಮೊದಲಾದವೆಷ್ಟೋ ನೆಲೆಯೂರಿವೆ. ಅದರೂ ಆತನು ಭಗವಂತನೇ. ನಂತರ ಬಂದಿರುವ ಯೇಸು ಜೀವನ ನಡೆದಿರುವುದು ಎಷ್ಟೋ ಸೌಮ್ಯದಿಂದ. ಆತನ ಜೀವನದಲ್ಲಿ ಯಾವ ಅಕ್ರಮಗಳು, ಅನ್ಯಾಯಗಳು ಇಲ್ಲ. ಸಂಘಪರವಾಗಿ ಎಷ್ಟೋ ಒಳ್ಳೆಯ ಪ್ರವರ್ತನೆಯನ್ನು ಹೊಂದಿ ಇತರರ ಬಾಧೆಗಳನ್ನು ಸಹಿತ ಇಲ್ಲದಂತೆ ಮಾಡಿ ಕೊನೆಗೆ ಮನುಷ್ಯರ ಕೈಯಲ್ಲಿ ನಿರ್ಭಲನಾಗಿ ದೀನಾತಿದೀನವಾಗಿ ಹಿಂಸಿಸಲ್ಪಟ್ಟ ಯೇಸು ಇಬ್ಬರೂ ಭಗವಂತರೇ. ಮನುಷ್ಯರ ಕೈಗೆ ಸಿಗದೆ ಮನುಷ್ಯರನ್ನೇ ಹಿಂಸಿಸಿದ ಕೃಷ್ಣನೂ, ಮನುಷ್ಯರ ಕೈಗೆ ಸಿಕ್ಕಿ ಹಿಂಸಿಸಲ್ಪಟ್ಟ ಯೇಸು ಇಬ್ಬರೂ ಭಗವಂತರೇ ಅಂದರೇ ಬಹಳ ವಿಚಿತ್ರ ವಾಗಿಯೇ ಇರುತ್ತದೆ. ಆದರೆ ಇಬ್ಬರೂ ಒಂದೇ ದೇವರ ಅವತಾರವೇ ಎನ್ನುವ ನಮ್ಮ ಮಾತು ನೂರಕ್ಕೆ ನೂರರಷ್ಟು ಸತ್ಯ.

ಇಲ್ಲಿ ಕೆಲವರಿಗೊಂದು ಪ್ರಶ್ನೆಬರಬಹುದು. ಅದು ಏನೆಂದರೆ! ಕ್ರೈಸ್ತರು ವಿಗ್ರಹಾರಾಧನೆ ಮಾಡುವುದಿಲ್ಲ. ಮೊದಲಿನಿಂದ ಇರುವ ಹಿಂದೂಗಳು ವಿಗ್ರಹಾರಾಧನೆ ಮಾಡುತ್ತಿದ್ದಾರೆ. ಪ್ರಭುವೇ ದೇವರೆಂದು ಪ್ರಭು ಒಬ್ಬನನ್ನೇ ನಂಬಿ ಆರಾಧಿಸುವವರು ಕ್ರೈಸ್ತರಾಗಿದ್ದು, ಅನೇಕ ದೇವರುಗಳನ್ನು ಆರಾಧಿಸುವವರು ಹಿಂದೂಗಳು. ಹಾಗಿರುವಾಗ ಇಬ್ಬರ ದೇವರು ಒಂದೇಯೆಂದು ಹೇಳುವುದು ಸಮಂಜಸವೇನಾ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ! ಕ್ರೈಸ್ತ ಸಮಾಜಕ್ಕೆ ಮೂಲಗ್ರಂಥ, ಮುಖ್ಯವಾದ ಗ್ರಂಥ ಪರಿಶುದ್ಧ ಬೈಬಲ್. ಹಾಗೆಯೇ ಹಿಂದೂಗಳಿಗೆ ಮುಖ್ಯವಾದ ಗ್ರಂಥ

ಭಗವದ್ಗೀತೆಯೆಂದು ಕೆಲವರನ್ನುತ್ತಿದ್ದಾರೆ. ಮೊದಲು ಸೃಷ್ಟಿ ಆದಿಯಲ್ಲಿ ಸ್ವತಃವಾಗಿ ದೇವರಿಂದ ಮನುಷ್ಯರಿಗಾಗಿ ಸೂರ್ಯನಿಗೆ ಹೇಳಲ್ಪಟ್ಟಿರುವುದು ಭಗವದ್ಗೀತೆ ಯಲ್ಲಿನ ಜ್ಞಾನ. ನಂತರ ದ್ವಾಪರಯುಗದ ಕೊನೆಯಲ್ಲಿ ಅದೇ ಜ್ಞಾನವನ್ನು ಭಗವಂತನಾದ ಕೃಷ್ಣನಿಂದ ಹೇಳಲ್ಪಟ್ಟಿದೆ. ಸ್ವತಃವಾಗಿ ಭಗವಂತನು ಹೇಳಿದ ವಿಷಯ ಭಗವದ್ಗೀತೆ. ಭಗವದ್ಗೀತೆಯಲ್ಲಿ ವಿಗ್ರಹಾರಾಧನೆ ಮಾಡಿರೆಂದು ಎಲ್ಲಿಯೂ ಹೇಳಲಿಲ್ಲ. ವಿಗ್ರಹಾರಾಧನೆ ಮಾಡಿದರೆ ದೇವರ ಹತ್ತಿರಕ್ಕೆ ಸೇರುವುದಿಲ್ಲವೆಂದು ಕೂಡ ಹೇಳಿದ್ದಾನೆ. ಅಜ್ಞಾನಿಗಳು ಮಾಡುವ ವಿಗ್ರಹಾರಾಧನೆ ಭಗವದ್ಗೀತೆಯಲ್ಲಿ ಇದೆಯೆಂದು ಅಂದುಕೊಳ್ಳುವುದು ಕೇವಲ ಅವಿವೇಕ. ದೇವರು ಒಂದು ರೂಪವನ್ನು ಧರಿಸಿ ಕೃಷ್ಣನಾಗಿ ಬಂದಾಗ ಏನು ಹೇಳಿದ್ದಾನೊ, ಅದೇ ವಿಧಾನವನ್ನು ಆತನು ಪುನಃ ಪ್ರಭುವಾಗಿ ಬಂದಾಗ ತಿಳಿಸಿದ್ದಾನೆ. ಭಗವಂತನ ಬೋಧನೆಯೇ ಪ್ರಭು ಬೋಧನೆಗಳೆಂದು, ಪ್ರಭುವು ಹೇಳಿರುವವೇ ಕೃಷ್ಣನು ಕೂಡ ಹೇಳಿದ್ದಾನೆಂದು ತಿಳಿಯದಿರುವುದು ಭೂಮಿಮೇಲೆಗೆ ಬಂದಿರುವ ದೇವರನ್ನು ಗುರುತಿಸದಿರುವುದೇ ಆಗುತ್ತದೆ. ಇಲ್ಲಿ ಮತ್ತೆ ಕೆಲವರು ಮತ್ತೊಂದು ಪ್ರಶ್ನೆ ಕೇಳಬಹುದು. ನಾವು ಕ್ರೈಸ್ತರು ವಿಗ್ರಹಾರಾಧನೆ ಮಾಡುವುದಿಲ್ಲ, ಆದ್ದರಿಂದ ಪ್ರಭುವು ಭಾವಚಿತ್ರವನ್ನು ಕೂಡ ಚರ್ಚಿನಲ್ಲಿ ಪ್ರಾರ್ಥನಾ ವೇದಿಕೆ ಮೇಲೆ ಇರಿಸದೆ ಕೇವಲ ಶಿಲುಬೆಯನ್ನು ಮಾತ್ರ ಇಟ್ಟುಕೊಂಡಿದ್ದೇವೆ. ನೀವು ವಿಗ್ರಹಾರಾಧನೆ ಇಲ್ಲವೆನ್ನುತ್ತಲೇ ಕೃಷ್ಣನ ಪ್ರತಿರೂಪ ಇಟ್ಟುಕೊಂಡು ಪೂಜಿಸುತ್ತಿದ್ದೀ ರಲ್ಲವೆ! ಎಂದು ಕ್ರೈಸ್ತರು ಕೇಳಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ!

ಪ್ರತಿಮೆಗು, ವಿಗ್ರಹಕ್ಕು ಬಹಳ ವ್ಯತ್ಯಾಸ ಇದೆ. ಪ್ರಪಂಚದಲ್ಲಿ ದೇವರು ಮಾನವನಾಗಿ ಬಂದಿರುವ ರೂಪವನ್ನು ಭಗವಂತ ಎನ್ನುತ್ತಿದ್ದೇವೆ. ದೇವರ ಪ್ರತಿರೂಪ ಭಗವಂತನಾಗಿದ್ದು, ಭಗವಂತನ ಪ್ರತಿರೂಪವನ್ನು ಪ್ರತಿಮೆ ಎನ್ನುತ್ತಿದ್ದೇವೆ. ದೇವರ ಪ್ರತಿರೂಪ ಅಲ್ಲದೇ ಇತರ ಚಿಲ್ಲರೆ ದೇವತೆಗಳ್ಯಾರ ರೂಪವನ್ನಾದರೂ ವಿಗ್ರಹ ಎನ್ನುತ್ತೇವೆ. ದೇವರ ಪ್ರತಿರೂಪವನ್ನು ವಿಗ್ರಹ ಎನ್ನಬಾರದು. ಶ್ರೀಕೃಷ್ಣಪ್ರತಿಮೆ ಭಗವಂತನ ಪ್ರತಿರೂಪವೇ ಹೊರತು ಚಿಲ್ಲರೆ

ದೇವರುಗಳ ವಿಗ್ರಹವಲ್ಲ. ಹಾಗೆಯೇ ಯೇಸುಪ್ರಭು ರೂಪವು ಎಲ್ಲಿದ್ದರೂ, ಅದು ಪ್ರಭುವು ಪ್ರತಿರೂಪವೇ ಹೊರತು ಬೇರೆಯಲ್ಲ. ದೇವರು ಪ್ರಪಂಚವೆಲ್ಲ ವ್ಯಾಪಿಸಿರುವವನು ಆದ್ದರಿಂದ ಆತನು ಎಂದಿಗೂ ವಿಗ್ರಹವಲ್ಲ. ದೇವರು ಪ್ರತಿಮ, ದೈವ ವಿಗ್ರಹ ಎನ್ನುವ ನಾಣ್ನುಡಿ ಇದೆ. ವಿಗ್ರಹ ಎಂದರೆ ರೂಪವನ್ನು ಗ್ರಹಿಸುವುದೆಂದು ಅರ್ಥ ಕೂಡ ಇದೆ. ದೇವರ ಪ್ರತಿಮೆಯಲ್ಲಿ ಹೊರತು ಉಳಿದ ಯಾವ ರೂಪಗಳಲ್ಲಾದರೂ ವಿಗ್ರಹ ಸೇರುತ್ತದೆ. ಸಾಧಾರಣ ಜೀವಿಯು ಗ್ರಹ ಆದರೆ ಕ್ಷುದ್ರದೇವತೆಗಳೆನ್ನುವ ಜೀವಿಯು ವಿಗ್ರಹ ಎಂದು ಕರೆಯಲ್ಪಡುತ್ತದೆ. ಸರ್ವವ್ಯಾಪಿಯಾದ ದೇವರನ್ನು ಚಿಲ್ಲರೆ ದೇವರಾಗಿ ಹೋಲಿಸಬಾರದು.

ನಾವು ಯಾವ ಇತರೆ ದೇವರುಗಳನ್ನು ಆರಾಧಿಸದೆ ದೇವದೇವನಾದ ಶ್ರೀಕೃಷ್ಣನ ಪ್ರತಿರೂಪವನ್ನು ಆರಾಧಿಸುತ್ತಿದ್ದೇವೆ. ನೀವು ದೇವರ ರೂಪವಾದ ಪ್ರಭುವು ಆಕಾರವನ್ನು ಕೂಡ ಇಟ್ಟುಕೊಳ್ಳದೆ, ಶಿಲುಬೆಯನ್ನು ಮುಂದೆ ಇಟ್ಟುಕೊಳ್ಳುವುದೇನು ಎಂದು ನಾವು ಪ್ರಶ್ನಿಸುತ್ತಿದ್ದೇವೆ. **ನನ್ನನ್ನು ನೋಡಿದವನು ನನ್ನ ತಂದೆಯನ್ನು (ದೇವರನ್ನು) ನೋಡಿದಂತೆಯೆಂದು** ಯೇಸುಪ್ರಭು ಹೇಳಿರುವ ಮಾತನ್ನು ಗೌರವಿಸದೆ, ಆತನ ಆಕಾರವನ್ನು ಕೂಡ ನೋಡದಂತೆ ಶಿಲುಬೆ ಆಕಾರವನ್ನು ನೋಡುವುದೇನು ಎಂದು ಪ್ರಶ್ನಿಸುತ್ತಿದ್ದೇನೆ. ಹೇಳುವುದು ಪ್ರಭು ಹೆಸರೂ, ಕೇಳುವುದು ಪ್ರಭು ಜ್ಞಾನವನ್ನು, ಆರಾಧಿಸುವುದು ನೋಡುವುದು ಶಿಲುಬೆಯನ್ನು. ಇದೇನಾದರೂ ಒಳ್ಳೆಯ ಪದ್ಧತಿಯಾ ಎಂದು ಕೇಳುತ್ತಿದ್ದೇವೆ. ನನ್ನನ್ನು ಬಿಟ್ಟು ಶಿಲುಬೆಯನ್ನು ಆರಾಧಿಸಿರೆಂದು ದೇವರು ಎಲ್ಲಿಯಾದರು ಹೇಳಿದ್ದಾನಾ? ಎಂದು ನಾನು ಪ್ರಶ್ನಿಸುತ್ತಿದ್ದೇನೆ. ಈ ವಿಷಯವಾಗಿ ಇನ್ನೂ ವಿವರವಾಗಿ ಒಂದು ವಿಷಯವನ್ನು ನೋಡೋಣ. ಒಬ್ಬನಿಗೆ ಅತ್ಯಂತ ಪ್ರೀತಿಕರವಾದ ತಂದೆ ಇದ್ದಾನೆಂದುಕೊ. ತಾನು ಶ್ರಮಪಟ್ಟು ಮಗನ ಸುಖವನ್ನು ಕೋರಿದ ತಂದೆಮೇಲೆ, ಆ ಮಗನಿಗೆ ಅಮಿತ ಪ್ರೀತಿ ಭಕ್ತಿ ಇದೆಯೆಂದುಕೊಳ್ಳೋಣ. ಅವನ ತಂದೆ ಅವನಿಗೆ ಎಷ್ಟು ಒಳ್ಳೆಯವನಾದರೂ ಇತರರ ದೃಷ್ಟಿಯಲ್ಲಿ ಕೆಟ್ಟವನಾಗಿ ಕಾಣಿಸಿದ್ದಾನೆ. ಶತ್ರುಗಳು ಆತನ ತಂದೆಯನ್ನು ಸಾಯಿಸಬೇಕೆಂದು

ಯೋಜನೆ ಹಾಕಿಕೊಂಡಿದ್ದಾರೆ. ಇಂತಹ ಆಯುಧದಿಂದ ಹತ್ಯೆ ಮಾಡಬೇಕೆಂದು ಕೊಂಡಿದ್ದಾರೆ. ಕೊಡಲಿಯನ್ನು ಚೂಪಾಗಿ ಹರಿತಮಾಡಿ ಇಟ್ಟುಕೊಂಡಿದ್ದಾರೆ. ಸಮಯ ನೋಡಿ ಕೊಡಲಿಯಿಂದ ಕಾಲು ಕೈಗಳನ್ನು ಕಡಿದುಹೋಗಿದ್ದಾರೆ. ಆ ಸಮಯದಲ್ಲಿ ಅಡ್ಡಹೋದರೆ ನನ್ನನ್ನು ಕೂಡ ಕೊಲ್ಲುತ್ತಾರೆಂದು ಮಗ ಅವರಿಗೆ ತಿಳಿಯದಂತೆ ಇದ್ದಾನೆ. ಆತನ ತಂದೆಯನ್ನು ಸಾಯಿಸಿದವರು ಅಟ್ಟಹಾಸವಾಗಿ ಹೋಗುತ್ತಾ ಸಾಯಿಸುವುದಕ್ಕೆ ಉಪಯೋಗಿಸಿದ ಕೊಡಲಿಯನ್ನು ಅಲ್ಲಿಯೇ ಬಿಟ್ಟುಹೋಗಿದ್ದಾರೆ. ಆ ಕೊಡಲಿಯನ್ನು ಮಗ ತೆಗೆದಿಟ್ಟುಕೊಂಡಿದ್ದಾನೆ. ಅವನ ತಂದೆಯ ಜ್ಞಾಪಕಾರ್ಥವಾಗಿ ಕೊಡಲಿಯನ್ನೇ ಇಟ್ಟುಕೊಂಡಿದ್ದಾನೆ. ಅವನು ಅನುಭವಿಸುವುದು ತಂದೆಕೊಟ್ಟ ಆಸ್ತಿಯೇ ಆದರೂ, ಅವನ ತಂದೆ ಭಾವಚಿತ್ರವನ್ನು ಕೂಡ ಇಟ್ಟುಕೊಳ್ಳಲಿಲ್ಲ. ವರ್ಷಕ್ಕೊಂದುಸಲ ಹಿರಿಯರ ಹಬ್ಬ ಬಂದಾಗ ಅವರ ತಂದೆಗೆ ಆರಾಧನೆ ಮಾಡಬೇಕಾಗಿರುತ್ತದೆ. ಆ ಆರಾಧನೆ ದಿನದಂದು ತಂದೆಯ ಭಾವಚಿತ್ರವನ್ನು ಸಹ ಇಟ್ಟುಕೊಳ್ಳದೆ, ತಮ್ಮ ಮುಂದೆ ಕೊಡಲಿಯನ್ನು ಇಟ್ಟುಕೊಂಡು ಆರಾಧಿಸಿದ್ದಾನೆ ಆ ದಿನ ಅವರ ತಂದೆ ಮಾತುಗಳನ್ನೇ ಗುರುತು ಮಾಡಿಕೊಂಡಿದ್ದಾನೆ, ಆದರೆ ತಂದೆ ಜ್ಞಾಪಕಕ್ಕೋಸ್ಕರ ತಂದೆಯನ್ನು ಸಾಯಿಸಿದ ಆಯುಧವನ್ನು ಇಟ್ಟುಕೊಂಡಿದ್ದಾನೆ. ಯಾರಾದರೂ ಕೇಳಿದರೆ ತಂದೆಮೇಲೆ ಅಭಿಮಾನವನ್ನು ತಿಳಿಸುತ್ತಾನೆ, ಆದರೆ ತಂದೆ ಕೊನೆಯದಾಗಿ ಯಾವುದರಿಂದ ಮರಣಿಸಿದ್ದಾನೊ ಅದನ್ನೇ ಆರಾಧಿಸುತ್ತಿದ್ದಾನೆ.

ಈ ವಿಷಯವನ್ನು ನೋಡಿದರೆ ಭಕ್ತಿ ತಂದೆ ಮೇಲೆ, ಆರಾಧನೆ ಕೊಡಲಿಯ ಮೇಲೆ ಇರುವುದು ಒಳ್ಳೆಯದಾ ಎನ್ನುವುದು ಪ್ರಶ್ನೆ. ನಿಜವಾಗಲು ತಂದೆಮೇಲೆ ಭಕ್ತಿ ಇರುವವನು ತಂದೆಯನ್ನು ಸಾಯಿಸಿದ ಆಯುಧವನ್ನು ನೋಡುತ್ತಲೇ ಅದರಮೇಲೆ ಕೋಪ ಬರಬೇಕು. ಅದನ್ನು ತನ್ನ ಕಣ್ಣಿಗೆಬೀಳದಂತೆ ಮಾಡಿಕೊಳ್ಳಬೇಕು. ಏಕೆಂದರೆ ಕೊಡಲಿಯನ್ನು ನೋಡಿದಾಗೆಲ್ಲ ತನ್ನ ತಂದೆ ಸಾವು ಜ್ಞಾಪಕ ಬರುತ್ತದೆ. ಮರಣಿಸಿದಾಗ ಆತನು ಬಾಧೆಪಟ್ಟ ದೃಶ್ಯ ಜ್ಞಾಪಕ ಬರುತ್ತದೆ. ಹಾಗೆ ಆತನು ಮರಣಿಸಿದ ದೃಶ್ಯವನ್ನು ನೋಡುವುದು ಒಳ್ಳೆಯದಾ!

ಅಥವಾ ಆತನು ಆನಂದದಿಂದ ಇರುವ ದೃಶ್ಯವು ಜ್ಞಾಪಕ ಬಂದರೆ ಒಳ್ಳೆಯದಾ? ನೀವೇ ಆಲೋಚಿಸಿರಿ. ತಂದೆಯ ಜ್ಞಾಪಕಾರ್ಥ ಕಣ್ಣಿಗೆ ಕಾಣಿಸಬೇಕಾಗಿರುವ ದೃಶ್ಯ ತಂದೆಯ ಚಿತ್ರಪಟ, ಕಣ್ಣಿಗೆ ಕಾಣಿಸಬಾರದ ದೃಶ್ಯ ಆತನ ಮರಣ. ಉದಾಹರಣೆಗೆ ನಮ್ಮ ಮನೆಯಲ್ಲಿ ತಾಯಿತಂದೆಯರು ಬದುಕಿರುವಾಗ ತೆಗೆಸಿರುವ ಫೋಟೋಗಳನ್ನು ಗೋಡೆಗೆ ತಗಲಿಸಿಕೊಂಡು ನೋಡಿಕೊಳ್ಳುತ್ತಿದ್ದೇವೆ ಹೊರತು, ಅವರ ಶವಗಳ ಫೋಟೋಗಳನ್ನು ಗೋಡೆಗೆ ತಗಲಿಸಿಕೊಂಡಿದ್ದೇವಾ? ಯಾರ ಮನೆಯಲ್ಲಾದರೂ ಫೋಟೋ ಆಲ್ಬಮ್‌ನಲ್ಲಿ ಹೊಸ ವಸ್ತ್ರಗಳನ್ನು ಧರಿಸಿ ಮುಗುಳುನಗುವಿನಿಂದಿರುವ ಫೋಟೋಗಳು ಇರುತ್ತವೆ. ಆದರೆ ಜ್ವರಬಂದು ದುಪ್ಪಟಿ ಹೊದ್ದುಕೊಂಡ ಫೋಟೋಗಳನ್ನಾಗಲಿ, ಮಂಚದ ಮೇಲೆ ದೀನಸ್ಥಿತಿಯಲ್ಲಿ ಮರಣಿಸುತ್ತಿರುವಾಗ ತೆಗೆದ ಫೋಟೋಗಳಾಗಲಿ ಇರುವುದಿಲ್ಲ. ತನ್ನವರನ್ನು ಬಾಧೆಪಡುತ್ತಾ ಇರುವುದನ್ನು ನೋಡಬೇಕೆಂದು ಯಾರೂ ಅಂದುಕೊಳ್ಳುವುದಿಲ್ಲ. ನಮ್ಮವರನ್ನು ಸಂತೋಷವಾಗಿಯೇ ನೋಡಬೇಕೆಂದು ಅಂದುಕೊಳ್ಳುತ್ತೇವೆ. ಯೇಸುಪ್ರಭುವನ್ನು ನೀವು ದೈವವಾಗಿ ಭಾವಿಸಿದರೇ, ಆತನ ಮೇಲೆ ಭಕ್ತಿ ವಿಶ್ವಾಸ ಇರುವವನಾದರೆ, ಆತನನ್ನು ನಿನ್ನ ಕುಟುಂಬ ದಲ್ಲಿನವರಿಗಿಂತ ಹೆಚ್ಚಾಗಿ ಇಷ್ಟಪಟ್ಟರೆ, ಆತನ ಹುಟ್ಟಿದ ದಿನದಂದು ಆತನು ಮರಣಿಸಿದ ಶಿಲುಬೆಯನ್ನು ನಮ್ಮಮುಂದೆ ಇಟ್ಟುಕೊಳ್ಳುವುದು, ಭಕ್ತಿಯಿಂದ ನೋಡುವುದು ಒಳ್ಳೆಯದಾ? ಎಂದು ಕೇಳುತ್ತಿದ್ದೇವೆ. ನಿಜವಾಗಲು ಪ್ರಭುವಿನ ಮೇಲೆ ಭಕ್ತಿ ಇರುವವರು, ಪ್ರಭುವನ್ನೇ ದೇವರಾಗಿ ಆರಾಧಿಸುವವರು ಸ್ವಲ್ಪವಾದರು ಆಲೋಚಿಸಬೇಕಾದ ವಿಷಯವಿದು.

ಜಗತ್ತಿನಲ್ಲಿ ಬಹಳ ಬಲವಾದುದು ಮಾಯೆ (ಸಾತಾನ್). ಸಾತಾನನ್ನು ದೇವರೇ ಸೃಷ್ಟಿಸಿಕೊಂಡು ಭೂಮಿಮೇಲೆ ತನಗೆ ಪ್ರತ್ಯರ್ಥಿಯಾಗಿ ಇರುವಂತೆ ಮಾಡಿದ್ದಾನೆ. ದೇವರಿಂದಲೇ ತಯಾರು ಮಾಡಲಾದ ಸಾತಾನ್ ಅಥವಾ ಮಾಯೆ ಬಹಳ ದೊಡ್ಡದೆಂದೇ ಹೇಳಬಹುದು. ಮನುಷ್ಯರನ್ನು ದೇವರ ಕಡೆ ಹೋಗದಂತೆ ಮಾಡುವುದೇ ಮುಖ್ಯವಾದ ಕೆಲಸವಾಗಿರುವ ಸೈತಾನ್ ದೈವ

ಭಕ್ತರೆಂದುಕೊಂಡ ಅವರೆಲ್ಲರನ್ನು ತನ್ನ ಮಾರ್ಗದಲ್ಲಿ ನಡೆಸುತ್ತಾ ದೇವರ ಮಾರ್ಗದಲ್ಲಿಯೇ ಇದ್ದೇವೆಂದುಕೊಳ್ಳುವಂತೆ ಭ್ರಮಿಸುವಂತೆ ಮಾಡುತ್ತಿದೆ. ನಿಜವಾದ ಪ್ರಭು ಭಕ್ತರನ್ನು ಯಾಮಾರಿಸಿ ಕೊನೆಗೆ ಪ್ರಭುವಿಗಿಂತ ಶಿಲುಬೆಯನ್ನೇ ದೊಡ್ಡದಾಗಿ ತೋರಿಸುತ್ತಿದೆ. ದೇವರ ಪ್ರಾರ್ಥನಾಮಂದಿರಗಳಾದ ಚರ್ಚಿಗಳ ಮೇಲೆ ಮೊದಲೇ ಶಿಲುಬೆಯನ್ನು ಕಾಣಿಸುವಂತೆ ಮಾಡುತ್ತಿದೆ. ಪ್ರತಿ ಕ್ರೈಸ್ತವನ ಕತ್ತಿನಲ್ಲಿಯು ಶಿಲುಬೆ ಗುರುತೆ ಕಾಣಿಸುತ್ತಿದೆ. ಇದನ್ನೆಲ್ಲವನ್ನು ನೋಡಿ ವಾಸ್ತವ ಜ್ಞಾನದಿಂದ ಯೋಚಿಸಿದರೆ ಇವರೆಲ್ಲರೂ ಪ್ರಭು ಭಕ್ತರಾ? ಶಿಲುಬೆ ಭಕ್ತರಾ? ಎನ್ನುವ ಪ್ರಶ್ನೆ ಬರುತ್ತದೆ. ಹಿಂದೂಗಳಂತೆ ವಿಗ್ರಹರಾಧನೆ ಮಾಡಬಾರದೆಂಬ ಒಂದೇ ಒಂದು ನಿಯಮವನಿಟ್ಟು ಕ್ರೈಸ್ತರನ್ನು ಸಾತಾನ್ ತನ್ನಕಡೆ ಸೆಳೆಯುತ್ತಿದೆಯೇ ಹೊರತು ಬೇರೆಯಲ್ಲವೆಂದು ತಿಳಿಯುತ್ತಿದೆ. ಸಾಕ್ಷಾತ್ ಪ್ರಭುವನ್ನೇ ವಂಚಿಸಲು ನೋಡಿದ ಸಾತಾನ್ ಮನಷ್ಯರನ್ನು ಲೆಕ್ಕಿಸುತ್ತದಾ! ಸಾತಾನ್ ಎಂದರೆ ಏನೊ, ಅದರ ಪ್ರಭಾವವೇನೊ, ಅದರ ಬಲವೇಷ್ಟೋ ತಿಳಿಯದವರು ಅದರ ಮಾರ್ಗದಲ್ಲಿಯೇ ನಡೆಯುತ್ತಾ ನಾವು ದೇವರ ಮಾರ್ಗದಲ್ಲಿಯೇ ಹೋಗುತ್ತಿದ್ದೇವೆಂದುಕೊಳ್ಳುತ್ತಾರೆ. ಆದ್ದರಿಂದ ಸಾತಾನ್‌ನನ್ನು ಕುರಿತು ಸ್ವಲ್ಪ ತಿಳಿದುಕೊಂಡರೆ ಹೊರತು ಅದರ ಬಗ್ಗೆ ಜಾಗ್ರುತರಾಗುವುದಿಲ್ಲ.

ಪರಿಶುದ್ಧ ಬೈಬಲ್ ಗ್ರಂಥದಲ್ಲಿ ಲೂಕಾ ಸುವಾರ್ತೆ 3ನೇ ಅಧ್ಯಾಯ 7ನೇ ವಾಕ್ಯದಲ್ಲಿ ಮತ್ತು ಮತ್ತಾಯ ಸುವಾರ್ತೆ 3ನೇ ಅಧ್ಯಾಯ 7ನೇ ವಾಕ್ಯದಲ್ಲಿ ಸಾಧಾರಣ ಮಾನವರನ್ನು ಉದ್ದೇಶಿಸಿ "ಸರ್ಪ ಸಂತಾನವಾ" ಎಂದು ಹೇಳಲ್ಪಟ್ಟಿದೆ. ಈ ವಾಕ್ಯದಲ್ಲಿ ಪ್ರಜೆಗಳನ್ನು ಉದ್ದೇಶಿಸಿ ಸರ್ಪ ಸಂತಾನವೆಂದು ಹೇಳುವುದರಲ್ಲಿ ಬಹಳ ವಿಶೇಷ ಭಾವನೆ ಇದೆ. ಮನುಷ್ಯರಿಗೆ ಮುಖ್ಯವಾದ ದೈವ ಗ್ರಂಥದಲ್ಲಿ(ಬೈಬಲ್) ಮನುಷ್ಯರನ್ನು ಉದ್ದೇಶಿಸಿ ಸರ್ಪಜಾತಿ ಎಂದು ಹೇಳುವುದರಲ್ಲಿ ಅರ್ಥವೇನೊ ವಿವರಿಸಿಕೊಳ್ಳೋಣ. ಸರ್ಪ ಎಂದರೆ ಹಾವು ಎಂದು ಎಲ್ಲರಿಗೂ ಗೊತ್ತು. ಅದನ್ನು ನೋಡುತ್ತಲೇ ಎಲ್ಲರೂ ಭಯಪಡುತ್ತಾರೆ. ಹಾವು ಎಷ್ಟು ಚಿಕ್ಕದಾದರೂ ಮನುಷ್ಯ ಅದಕ್ಕೆ ಭಯಪಡುವುದು ನಡೆಯುತ್ತಿದೆ.

ಏಕೆಂದರೆ! ಹಾವಿನ ತಲೆಯಲ್ಲಿ ವಿಷವಿದೆ. ಅದು ಕಚ್ಚಿದರೆ ಮನುಷ್ಯ ನಿಮಿಷಗಳು ಅಥವಾ ಗಂಟೆಗಳಲ್ಲಿ ಮರಣಿಸುತ್ತಾನೆ. ಹಾವಿನಿಂದ ಹಾನಿ ತಪ್ಪುವುದಿಲ್ಲವೆಂದು ಎಲ್ಲರೂ ಅದಕ್ಕೆ ದೂರವಾಗಿ ಇರಬೇಕೆಂದುಕೊಳ್ಳುತ್ತಾರೆ. ಸರ್ಪವು ಎಲ್ಲರಿಗೂ ತಿಳಿದ ಪ್ರಮಾದಕರ ಜೀವರಾಶಿ, ಹಾವಿನಿಂದ ಮನುಷ್ಯನಿಗೆ ಪ್ರಮಾದವೇ ಎಂದು ತಿಳಿದರೂ ಕೆಲವರಿಗೆ ಹಾವನ್ನು ಹಿಡಿದುಕೊಂಡು, ಅದರ ವಿಷಕೋರೆಗಳನ್ನು ಕಿತ್ತುಹಾಕಿ, ಅದಕ್ಕೆ ಭಯಪಡದೆ ಅದನ್ನೇ ಆಡಿಸುತ್ತಿರುತ್ತಾರೆ. ಎಷ್ಟೋಜನ ಹಾವಿಗೆ ಭಯಪಡುತ್ತಿರುವಾಗ ಬಹುಸ್ವಲ್ಪಜನ ಮಾತ್ರ ಅದನ್ನು ಅವರ ಕೈಯೊಳಗೆ ತೆಗೆದುಕೊಂಡು ಅದನ್ನೇ ಆಡಿಸುತ್ತಾ ತಮ್ಮ ಅಧೀನದಲ್ಲಿ ಇಟ್ಟುಕೊಂಡಿದ್ದಾರೆ. ಇದರ ಪ್ರಕಾರ ನೋಡಿದರೆ ಮನುಷ್ಯನ ಅಧೀನದಲ್ಲಿ ಹಾವು ಇದ್ದರೆ ಅದರಿಂದ ಸಂಭವಿಸುವ ಪ್ರಮಾದವಿರುವುದಿಲ್ಲ. ಹಾವು ಮನುಷ್ಯನ ಅಧೀನದಲ್ಲಿ ಇಲ್ಲದಿದ್ದರೆ ಹಾವಿಗೆ ಮನುಷ್ಯ ಭಯಪಡಬೇಕಾಗಿ ಬರುತ್ತದೆ. ಹಾವುಗಳನ್ನು ಆಡಿಸುವವನ ಅಧೀನದಲ್ಲಿರುವ ಹಾವು ಅವನ ಕೈಯಿಂದ ತಪ್ಪಿಸಿಕೊಂಡು ಹೋದರೆ, ತಿರುಗಿ ಅವನನ್ನೇ ಕಚ್ಚಿ ಸಾಯಿಸುತ್ತದೆ. ಮೊದಲು ಕೋರೆಗಳನ್ನು ಕಿತ್ತುಹಾಕಿದ್ದಾನೆ ಅಲ್ಲವೆ! ನಂತರ ಅವನನ್ನು ಹೇಗೆ ಕಚ್ಚುತ್ತದೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಹಾವಿಗೆ ಕೋರೆಗಳು ಕಿತ್ತಿದರೂ ಕೇವಲ ಹತ್ತರಿಂದ ಹದಿನೈದು ದಿನಗಳಲ್ಲಿ ಅದರ ಕೋರೆಗಳು ಪುನಃ ಬೆಳೆಯುತ್ತವೆ. ಆದ್ದರಿಂದ ಹಾವಿನವನು ತನ್ನ ಅಧೀನದಲ್ಲಿರುವ ಯಾವ ಹಾವನ್ನಾದರು ಹತ್ತುದಿನಗಳಿಗೊಂದು ಸಲ ಕೋರೆಗಳನ್ನು ತೆಗೆದು ಹಾಕಬೇಕಾಗಿರುತ್ತದೆ. ಇದನ್ನು ನೋಡಿದರೆ ಯಾವಾಗಲೂ ಹಾವನ್ನು ತನ್ನ ಅಧೀನದಲ್ಲಿಟ್ಟುಕೊಂಡರೆ ಅದರ ಕೋರೆಗಳು ಕೀಳುತ್ತಿರಬೇಕು. ಹಾಗಾಗದಿದ್ದರೆ ಮನುಷ್ಯ ಅದಕ್ಕೆ ಭಯಪಡದೆ ತಪ್ಪುವುದಿಲ್ಲ, ಅದರಿಂದ ಹಾನಿ ತಪ್ಪುವುದಿಲ್ಲ.

ವಿಷಕ್ಕೆ ಗುರುತು ಹಾವು. ಅಮೃತಕ್ಕೆ ಗುರುತು ದೇವರು. ವಿಷವು ಮನುಷ್ಯನ್ನನ್ನು ಮೃತನನ್ನಾಗಿ ಮಾಡಬಲ್ಲದು. ಮೃತ ಎಂದರೆ ಮರಣ. ಅಮೃತ ಎಂದರೆ ಮೃತವಿಲ್ಲದಿರುವುದು ಸಾವಿಲ್ಲದಿರುವುದೆಂದು ಅರ್ಥ. ವಿಷಕ್ಕೆ ನಿಲಯ

ಸರ್ಪ. ಅಮೃತಕ್ಕೆ ನಿಯಲ ದೇವರು. ಆದ್ದರಿಂದಲೇ ದೇವರ ಜ್ಞಾನವನ್ನು ಬೈಬಲ್‌ನಲ್ಲಿ ಜೀವಜಲ ಎಂದಿದ್ದಾರೆ. ಹಾವಿನಿಂದ ವಿಷ, ವಿಷದಿಂದ ಮರಣ ಇದೆ. ಹಾಗೆ ದೇವರಿಂದ ಜೀವಜಲ (ಅಮೃತ) ಜೀವಜಲದಿಂದ ಮರಣವನ್ನು ಜಯಿಸುವುದು ಇದೆ. ಇದನ್ನನುಸರಿಸಿ ನೋಡಿದರೆ ಸರ್ಪ ದೇವರಿಗೆ ವಿರುದ್ಧವಾದ ಸೈತಾನ್‌ಗೆ ಸಮಾನವೆಂದು ತಿಳಿಯುತ್ತಿದೆ. ಭೂಮಿಮೇಲೆ ಪ್ರಜೆಗಳು ದೇವರ ಧ್ಯಾಸ (ಗಮನ) ವಿಲ್ಲದೆ ಸಾತಾನ್ ಪ್ರಭಾವದಲ್ಲಿ ಮುಳುಗಿದ್ದಾರೆ ಆದ್ದರಿಂದ ಮನುಷ್ಯರನ್ನು ಸರ್ಪಸಂತಾನ ಎಂದು ಹೇಳಿದ್ದಾರೆ. ದೇವರ ಜ್ಞಾನವನ್ನು ಹೊಂದಿದವರೆಲ್ಲರೂ ದೈವಸಂತಾನವೆಂದು, ಸಾತಾನ್ ಗುಣಗಳನ್ನು ಹೊಂದಿದವರೆಲ್ಲರನ್ನೂ ಸರ್ಪ ಸಂತಾನವೆಂದೂ ಹೇಳಬಹುದು. ದೇವರ ಜ್ಞಾನ ಹೊಂದಿದ್ದೇವೆಂದುಕೊಳ್ಳುವವರಲ್ಲಿ ಕೂಡ ಸಾತಾನ್ ಪ್ರವೇಶಿಸಿ ಅದರ ವಶದಲ್ಲಿ ಮನುಷ್ಯನನ್ನು ಇಟ್ಟುಕೊಳ್ಳುತ್ತಿದೆ. ಸಾತಾನ್ ಬಲ ಬಹಳ ಅಪಾರವಾದುದು. ಯಾರಾದರೂ ತನ್ನಕಡೆ ಸುಲಭವಾಗಿ ಸೆಳೆದುಕೊಳ್ಳಬಲ್ಲದು. ಆದ್ದರಿಂದ ಸಾತಾನ್‌ನನ್ನು ಬಲವಾದ ಸರ್ಪವಾಗಿ ಹೋಲಿಸಿ ಅದರ ವಶದಲ್ಲಿರುವ ಮನುಷ್ಯರೆಲ್ಲರನ್ನು ಸರ್ಪ ಸಂತಾನವೆಂದು ಪರಿಶುದ್ಧ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ಭೂಮಿಮೇಲೆ ಬಲವಾದ ಸರ್ಪವನ್ನು ಕೊಂಡಶಿಲುಬೆ(ಹೆಬ್ಬಾವು) ಎನ್ನುತ್ತೇವೆ. ಎಲ್ಲಾ ಸರ್ಪಗಳಿಗಿಂತ ಬಲವಾದ ಸರ್ಪ ಕೊಂಡಶಿಲುಬೆ ಎಂದು ಬಹಳ ಜನರಿಗೆ ತಿಳಿದಿದೆ. ಶಿಲುಬೆ ಎಂದರೆ ಹಾವೆಂದ ಕೊಂಡಶಿಲುಬೆ ಎಂದರೆ ದೊಡ್ಡಹಾವೆಂದು ಅರ್ಥ. ಹಾವು ಮನುಷ್ಯನ ಅಧೀನದಲ್ಲಿದ್ದರೆ ಪ್ರಮಾಧ ಇರುವುದಿಲ್ಲ. ಹಾವು ಮನುಷ್ಯನ ಅಧೀನದಲ್ಲಿ ಇಲ್ಲದಿದ್ದರೆ ಪ್ರಮಾದವೆಂದು ತಿಳಿದುಕೊಂಡಿದ್ದೇವೆ. ದೈವಜ್ಞಾನವನ್ನು ತಿಳಿಯುವವನು, ದೈವಮಾರ್ಗದಲ್ಲಿ ಪ್ರಯಾಣಿಸುವವನು ಸಾತಾನ್‌ನನ್ನು ತನ್ನ ಆಧೀನದಲ್ಲಿ ಇಟ್ಟುಕೊಳ್ಳಬೇಕು. ಈ ವಿಷಯ ತಿಳಿಸುವುದಕ್ಕೆ ಪರಿಶುದ್ಧ ಬೈಬಲ್ ಗ್ರಂಥದಲ್ಲಿ ಲೂಕಾ ಸುವಾರ್ತೆ 14ನೇ ಅಧ್ಯಾಯ 27ನೇ ವಾಕ್ಯದಲ್ಲಿ **"ಯಾರಾದರೂ ತನ್ನ ಶಿಲುಬೆಯನ್ನು**

**ಹೊತ್ತುಕೊಂಡು ನನ್ನನ್ನು ಹಿಂಬಾಲಿಸದ ಪಕ್ಷದಲ್ಲಿ ಅವನು ನನ್ನ ಶಿಷ್ಯನು ಆಗಲಾರನು."** ಎಂದು ಹೇಳಿದ್ದಾನೆ. ಹಾಗೆಯೇ ಮತ್ತೊಂದು ಕಡೆ ಮತ್ತಾಯ ಸುವಾರ್ತೆ 16ನೇ ಅಧ್ಯಾಯ 24, 25 ವಾಕ್ಯಗಳಲ್ಲಿ **"ಯಾರಾದರೂ ನನ್ನನ್ನು ಹಿಂಬಾಲಿಸಲು ಕೋರಿದ ಪಕ್ಷದಲ್ಲಿ ತನ್ನನ್ನು ತಾನು ಉಪೇಕ್ಷಿಸಿಕೊಂಡು ತನ್ನ ಶಿಲುಬೆಯನ್ನು ಎತ್ತುಕೊಂಡು ನನ್ನನ್ನು ಹಿಂಬಾಲಿಸಬೇಕು. ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಕೋರುವವನು ಅದನ್ನು ಕಳೆದುಕೊಳ್ಳುವನು. ನನ್ನ ನಿಮಿತ್ತವಾಗಿ ತನ್ನ ಪ್ರಾಣವನ್ನು ಕಳೆದುಕೊಂಡವನು ಅದನ್ನು ದಕ್ಕಿಸಿಕೊಳ್ಳುತ್ತಾನೆ."** ಹೇಳಿದ್ದಾನೆ. ಈ ವಾಕ್ಯಗಳಲ್ಲಿ ನಿಗೂಢವಾದ ಅರ್ಥವೇನೆಂದರೆ! ಯಾರಾದರೂ ಜೀವನದಲ್ಲಿ ದೈವಮಾರ್ಗದಲ್ಲಿ ನಡೆಯಬೇಕೆಂದರೆ ತನ್ನನ್ನು ಆತಂಕಪಡಿಸುವ, ತನ್ನನ್ನು ಹಿಂಸಿಸುವ ಸಾತಾನ್ ಎನ್ನುವ ಹಾವನ್ನು (ಶಿಲುಬೆಯನ್ನು) ತನ್ನ ಅಧೀನದಲ್ಲಿ ಇಟ್ಟುಕೊಂಡು ಅದನ್ನು ಜ್ಞಾನವೆನ್ನುವ ಬುಟ್ಟಿಯಲ್ಲಿ ಬಂಧಿಸಿ ತಲೆಮೇಲೆ ಇಟ್ಟುಕೊಂಡು ದೇವರನ್ನು ಅನುಸರಿಸಬೇಕು. ದೇವರ ನಿಮಿತ್ತ ಹಾವನ್ನು (ಶಿಲುಬೆಯನ್ನು) ನೀವು ದಕ್ಕಿಸಿಕೊಂಡು ನಿನ್ನ ಆಧೀನದಲ್ಲಿ ಇಟ್ಟುಕೊಳ್ಳಬೇಕು. ದೇವರ ನಿಮಿತ್ತವಲ್ಲದೆ ತಾನು ಹಾಯಾಗಿ ಲೋಕದಲ್ಲಿ ಬದುಕುವುದಕ್ಕೆ ಸಾತಾನನ್ನು ವಿರೋಧಿಸಬೇಕಾದ ಕೆಲಸವಿಲ್ಲ. ಜೀವನದಲ್ಲಿ ಎಲ್ಲಾ ಸುಖಗಳನ್ನು ಒದಗಿಸಿ ಮನುಷ್ಯನನ್ನೇ ತನ್ನ ಅಧೀನದಲ್ಲಿ ಸಾತಾನ್ ಇಟ್ಟುಕೊಳ್ಳುತ್ತದೆ. ಆದ್ದರಿಂದ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವವನು ಶಿಲುಬೆಯನ್ನು ಬಿಡುತ್ತಾನೆಂದು ಹೇಳಿದ್ದಾನೆ. ಇಲ್ಲಿ ದೇವರಿಗೋಸ್ಕರವಾದರೆ ಶಿಲುಬೆಯನ್ನು ನಿನ್ನ ಕೈಯಲ್ಲಿ ಹಿಡಿದುಕೊ ಎಂದು, ನಿನಗೋಸ್ಕರವಾದರೆ ಅದನ್ನು ಬಿಟ್ಟು ಅದರ ಇಷ್ಟಬಂದಂತೆ ಹೋಗಲು ಬಿಡುತ್ತೀಯೆಂದು ಹೇಳಿದ್ದಾನೆ.

ಶಿಲುಬೆ ಎಂದರೆ ಹಾವು ಎಂದು, ಕೊಂಡ ಶಿಲುಬೆ ಎಂದರೆ ಬಲವಾದ ದೊಡ್ಡಹಾವು(ಹೆಬ್ಬಾವು) ಎಂದು ನಾವು ಅಂದುಕೊಂಡಿದ್ದೇವೆ. ಸಾತಾನ್ (ಮಾಯೆ) ಹಾವಿನಂತೆ ಮನುಷ್ಯನನ್ನು ಸುತ್ತಿಕೊಂಡು ದುಃಖವನ್ನು ಉಂಟುಮಾಡುತ್ತಿದೆ. ಪ್ರತಿ ಮನುಷ್ಯನಿಗೆ ಶಿಲುಬೆ ಇದೆಯೆಂದು ಹೇಳಬಹುದು.

ಪ್ರತಿ ಮನುಷ್ಯ ತನ್ನ ಶಿಲುಬೆಯನ್ನು ತಾನು ತನ್ನ ಅಧೀನದಲ್ಲಿ ಇಟ್ಟುಕೊಂಡಾಗಲೇ ದೈವಮಾರ್ಗದಲ್ಲಿ ಪ್ರಯಾಣಿಸಬಲ್ಲನು. **ನಿನ್ನ ಜೀವದಲ್ಲಿ ದೈವಮಾರ್ಗದಲ್ಲಿ ಹೆಜ್ಜೆಹೆಜ್ಜೆಗು ಆತಂಕವನ್ನು ಉಂಟುಮಾಡುವ ಸಾತಾನ್‌ನನ್ನು ಶಿಲುಬೆ ಎನ್ನುತ್ತೇವೆ.** ಮನುಷ್ಯನಾಗಿ ಬಂದಿರುವ ಪ್ರಭುವನ್ನು ಸಹ ಎಷ್ಟೋ ಆತಂಕಗಳನ್ನುಂಟುಮಾಡಿದ ಸಾತಾನ್‌ಗೆ ಬದಲಿಹೆಸರೇ **"**ಶಿಲುಬೆ**"**. ಪ್ರಭುವನ್ನು ಮೂವತ್ತುಮೂರು ವರ್ಷಗಳಿಗೆ ಮರಣಿಸುವಂತೆ ಮಾಡಿರುವುದು ಕೂಡ ಸಾತಾನೇ. ನಿಮಗೆ ಜ್ಞಾನವನ್ನು ಹೇಳಿದ ಪ್ರಭುವು ಕೂಡ ನನ್ನಕೈಯಲ್ಲಿ ಸಿಲುಕಿ, ನನ್ನ ಮೂಲಕವೇ ಮರಣಿಸಿದ್ದಾನೆಂದು ತಿಳಿಸುವುದಕ್ಕೆ ಶಿಲುಬೆ ಎಂದು ಹೆಸರು ಇಡಲಾದ ಕಟ್ಟಿಗೆಗಳ ಮೇಲೆ ಪ್ರಭುವು ಮರಣಿಸುವಂತೆ ನಡೆದಿದೆ. ಪ್ರಭು ಸಾತಾನ್ ಮಾತನ್ನು ಕೇಳದಂತೆ ಪ್ರಾಣತ್ಯಾಗ ಮಾಡಿದ್ದಾನೆ. ಆತನ ಮರಣ ನಮಗೆ ನಿಮ್ಮ ಪ್ರಾಣ ಹೋದರೂ ಸಾತಾನ್ ಮಾತುಕೇಳಬೇಡವೆಂದು ತಿಳಿಸುವ ಮಹೋನ್ನತ ಸಂದೇಶ. ಜೀವನದಲ್ಲಿ ಎಷ್ಟೋ ಜ್ಞಾನ ತಿಳಿಸಿ ತನ್ನ ಜ್ಞಾನಶಕ್ತಿಯಿಂದ ಎಷ್ಟೋ ಜನರ ರೋಗಗಳನ್ನು ಸಹಿತ ಕಳೆದ ಪ್ರಭುವು ಹೆಜ್ಜೆಹೆಜ್ಜೆಗು ಸಾತಾನ್ ಶೋಧನೆಗೆ ಗುರಿಯಾಗಿ ಅದಕ್ಕೆ ವಿರೋಧ ದಿಶೆಯಲ್ಲಿ ನಡೆದು ನಮ್ಮನ್ನು ಹಾಗೆಯೇ ನಡೆಯಬೇಕೆಂದಿದ್ದಾನೆ. ದೈವಮಾರ್ಗಕ್ಕೆ ವಿರುದ್ಧವಾದರೆ ನಿನ್ನ ಶರೀರ ಭಾಗಗಳನ್ನು ಕೂಡ ಖಂಡಿಸೆಂದಿದ್ದಾನೆ. ಆದರೆ ಮಾನವರು ಸಾತಾನ್ ಎಂದರೇ ಏನೋ ತಿಳಿಯದೇ, ಅದರ ಪ್ರತಿರೂಪವೆಂದರೇ ಏನೋ ತಿಳಿಯಲಾರದೆ ಹೋಗಿದ್ದಾರೆ. ಸಾತಾನ್ ಬದಲಿಹೆಸರು ಶಿಲುಬೆ ಎಂದು ತಿಳಿಯದೆ ಪ್ರಭುವನ್ನಲ್ಲದೇ ಶಿಲುಬೆಯನ್ನೇ ಕತ್ತಿನಲ್ಲಿ ಧರಿಸಿದ್ದಾರೆ. ಪ್ರಭುವನ್ನು ಹತಮಾಡಿದ ಶಿಲುಬೆಯನ್ನು, ಪ್ರಭುವಿನ ರಕ್ತದಿಂದ ನೆನೆದ ಶಿಲುಬೆಯನ್ನು, ಪ್ರಭುವು ರಕ್ತವನ್ನು ರುಚಿ ನೋಡಿದ ಶಿಲುಬೆಯನ್ನು, ಮಾನವನು ಪ್ರಭುವಿಗಿಂತ ಹೆಚ್ಚಾಗಿ ಇಟ್ಟುಕೊಂಡಿದ್ದಾ ನೆಂದರೆ ಸಾತಾನ್ ಪ್ರಭಾವ ಎಂಥಹದ್ದೋ ಅರ್ಥವಾಗಿರುತ್ತದೆ.

ಕ್ರೈಸ್ತ ಸಮಾಜದಲ್ಲಿ ಶಿಲುಬೆಗೆ ಬಹಳ ಪ್ರಾಧಾನ್ಯತೆ ಇದೆ. ಅದು ಸಾತಾನ್ ಪ್ರಭಾವವೇ. ಸಾತಾನ್ ನಿಜಸ್ಥಿತಿ ಹೊರಗೆ ಅರ್ಥವಾಗುವುದಕ್ಕೆ ಹೇಳಿದ

ನಮ್ಮ ಮೇಲೆ ತನ್ನ ಪ್ರಭಾವವನ್ನು ತೋರಿಸಿ, ತನ್ನ ಸಂತಾನವಾದ (ಸರ್ಪ ಸಂತಾನವಾದ) ಪ್ರಜೆಗಳಿಂದ ತೊಂದರೆಗಳು ಉಂಟುಮಾಡುತ್ತದೆಂದು ತಿಳಿದು, ದೈವಮಾರ್ಗದಲ್ಲಿ ಎಲ್ಲ ಕಷ್ಟಗಳಿಗೆ ಸಹಿಸಿಕೊಳ್ಳಬೇಕಾಗಿದ್ದೆಯೆಂದು ನಿಶ್ಚಯಿಸಿಕೊಂಡಿದ್ದೇವೆ. ಆದ್ದರಿಂದ ಧೈರ್ಯವಾಗಿ ಶಿಲುಬೆ ಎಂದರೆ ಸಾತಾನ್ ಎಂದು ತಿಳಿಸುತ್ತಿದ್ದೇವೆ. ನಾವು ಹೇಳುವುದಲ್ಲದೆ "ಕರುಣಾ ಮಯನು", "ದಯಾಮಯನು" ಎನ್ನುವ ಪ್ರಭುವು ಸಿನಿಮಾಗಳಲ್ಲಿ ಕೂಡ ಸಾತಾನ್‌ನನ್ನು ಕೊಂಡಶಿಲುಬೆಯಾಗಿ ತೋರಿಸುವುದು ನಡೆದಿದೆ. ದೇವರೇ ಆ ವಿಧವಾಗಿ ಆ ದೃಶ್ಯವನ್ನು ಆ ಸಿನಿಮಾಗಳಲ್ಲಿ ಬರುವಂತೆ ಮಾಡಿ, ಈ ದಿನ ನಾವು ಹೇಳಿದ ಮಾತಿಗೆ ಬಲವನ್ನು ಕೈಗೂಡಿಸಿದ್ದಾನೆ. ಹಾವು ಹೇಗಾದರೂ ತಿರುಗುವುದಕ್ಕೆ ಅನುಕೂಲವಾದ ಶರೀರ ಇರುವುದು. ಹಾವನ್ನು ನಾಲ್ಕು ವಿಧಗಳಾಗಿ ಮಾಡಿದರೆ ಈ ದಿನ ನಾವು ನೋಡುತ್ತಿರುವ ಚೆಕ್ಕೆಯಿಂದ ಮಾಡಿದ ಶಿಲುಬೆ ಆಕಾರ ಬರುತ್ತದೆ.

ಕ್ರೈಸ್ತರಲ್ಲಿ ಬಹಳಜನ ಪ್ರಭುವನ್ನು ಜ್ಞಾಪಕಮಾಡಿಕೊಂಡಂತೆ ಬಲಗೈಯಿಂದ ಎರಡು ಭುಜಗಳನ್ನು ಮೇಲೆ ತಲೆಯನ್ನು ಕೆಳಗೆ ಹೃದಯ ಸ್ಥಾನವನ್ನು ತಾಕುವುದು ಅಲ್ಲಲ್ಲಿ ನೋಡುತ್ತಿದ್ದೇವೆ. ಅದು ಶಿಲುಬೆ ಗುರುತನ್ನು ಸೂಚಿಸುತ್ತಾ ನಾಲ್ಕು ಕೊನೆಗಳನ್ನು ಕೈಯಿಂದ ತೋರಿಸುವುದೇ ಆಗುತ್ತಿದೆ. ಹಾವು ನಾಲ್ಕು ಕೊನೆಗಳ ಗುರುತುಗಳನ್ನು ಕೈಯಿಂದ ತೋರಿಸುತ್ತಾ, ಅದು ದೈವಶಕ್ತಿ ಎಂದುಕೊಳ್ಳುವಂತೆ ಸಾತಾನ್ ಮನುಷ್ಯರನ್ನು ಮಭ್ಯವಿರಿಸುತ್ತಿದೆ. ಇಲ್ಲಿಯವರೆಗೂ ಪ್ರಭು ಮೇಲೆ ಭಕ್ತಿ ಇರುವವರು ಪರೋಕ್ಷವಾಗಿ ಸಾತಾನ್‌ನನ್ನೇ ಶಿಲುಬೆ ರೂಪದಿಂದ ಆರಾಧಿಸುತ್ತಿದ್ದಾರೆ. ಪ್ರತ್ಯಕ್ಷವಾಗಿ ಪ್ರಭುವನ್ನು ಕುರಿತು ಹೇಳಿಕೊಳ್ಳುತ್ತಿದ್ದರೂ, ಪರೋಕ್ಷವಾಗಿ ಸಾತಾನ್‌ನನ್ನೇ ಹೊಗಳುತ್ತಿದ್ದಾರೆ.




ಹಿಂದೂಗಳು ನಾವು ಭಕ್ತಿಪರರೆಂದುಕೊಂಡು, ದೇವರನ್ನು ಆರಾಧಿಸುತ್ತಿದ್ದೇವೆಂದು ಕೊಂಡು, ದೇವರಲ್ಲದಂಥಹ ಕ್ಷುದ್ರದೇವತೆಗಳನ್ನು ಆರಾಧಿಸುತ್ತಿದ್ದಾರೆ. ಉದಯ ಸ್ನಾನ ಮಾಡಿ ಯಾವುದೋ  ಒಂದು ಫೋಟೋಗೆ ನಮಸ್ಕರಿಸಿದ ನಂತರ ನಿತ್ಯಕರ್ಮ ಮಾಡುವ ಅಭ್ಯಾಸ ಕೆಲವರಿಗಿದೆ. ಕೆಲವರು ಯಾವುದೋ ಒಂದು ದೇವಾಲಯಕ್ಕೆ ಹೋಗಿ ಗಂಟೆಹೊಡೆದು ಅರ್ಥವಿಲ್ಲದ ಆಚಾರಗಳು ಮಾಡುತ್ತಿದ್ದಾರೆ. ಈ ವಿಧವಾಗಿ ಎಷ್ಟೋಜನ ಆಚರಿಸುತ್ತಾ ನಾವು ಮಾಡುವ ಭಕ್ತಿಯೇ ಸರಿಯಾದುದೆಂದುಕೊಳ್ಳುತ್ತಿದ್ದಾರೆ. ಅದು ಸರಿಯಾದ ಪದ್ಧತಿ ಅಲ್ಲವೆಂದು, ಆ ವಿಧವಾಗಿ ಮಾಡುವುದು ವಿಶ್ವಕ್ಕೆ ಅಧಿಪತಿಯಾದ ದೇವರಿಗೆ ಇಷ್ಟವಿರುವುದಿಲ್ಲವೆಂದು ಯಾರಿಗೂ ತಿಳಿದಿಲ್ಲ. ಸಾಮಾನ್ಯ ಮಾನವರಿಗೆ ಅಲ್ಲದೆ

ದೊಡ್ಡ ದೊಡ್ಡ ಸ್ವಾಮೀಜಿಗಳು, ಪೀಠಾಧಿಪತಿಗಳು ತಾವು ಮಾಡುವುದೇ ಸರಿಯಾದ ಪದ್ಧತಿಯೆಂದು ಅಂದುಕೊಳ್ಳುತ್ತಾ, ಮಾಯೆ (ಸಾತಾನ್) ಕೆಲಸವನ್ನೇ ಮಾಡುತ್ತಿದ್ದಾರೆ. ಮಾಯ ಆ ವಿಧವಾಗಿ ಎಲ್ಲರನ್ನು ಮಭ್ಯಪಡಿಸುತ್ತಾ, ದೇವರು ಹೇಳಿದಂತೆ ಮಾಡದಂತೆ ಮಾಡುತ್ತಿದೆ. ದೇವರು ಭಗವದ್ಗೀತೆಯಲ್ಲಿ ಮಾಯೆ ಯೊಂದರ ಆರಾಧನೆಗಳ ಬಗ್ಗೆ ಹೇಳಿ, ಆ ವಿಧ ಆರಾಧನೆಯಿಂದ ನನ್ನನ್ನು ಸೇರಲಾರರು ಎಂದಿದ್ದಾನೆ. **"ಯಜ್ಞಗಳಿಂದಲೂ, ದಾನಗಳಿಂದಲೂ, ವೇದಪಾರಾಯಣದಿಂದಲೂ, ಉಗ್ರವಾದ ತಪಸ್ಸುಗಳಿಂದಲೂ ನನ್ನನ್ನು ತಿಳಿದುಕೊಳ್ಳುವುದು, ನನ್ನ ಹತ್ತಿರಕ್ಕೆ ಸೇರುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ"** ಎಂದು ಪರಮಾತ್ಮನಾಗಿ ಒಂದುಸಲ, ಭಗವಂತನಾಗಿ ಒಂದುಸಲ ಗೀತೆಯಲ್ಲಿ ಹೇಳುವುದು ನಡೆದಿದೆ. ಸ್ವತಃವಾಗಿ ದೇವರೇ ಹೇಳಿದರೂ ಆತನ ಮಾತನ್ನು ತಿಳಿಯದಂತೆ ಮಾಯೆ ಎಲ್ಲರನ್ನು ಮಭ್ಯಪಡಿಸಿ ಬೇಡವೆಂದ ಕೆಲಸಗಳನ್ನೇ (ಆರಾಧನೆಗಳನ್ನೇ) ಎಲ್ಲರಿಂದಲು ಮಾಡಿಸುತ್ತಿದೆ. ಇಂದು ದೇವರೇ ಇಳಿದು ಬಂದು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದಂತೆ ಮಾಯೆ (ಸಾತಾನ್) ಅವರನ್ನು ತಯಾರಿಸಿದೆ.

ಕ್ರೈಸ್ತವ ಸಮಾಜದಲ್ಲಿರುವವರು ಹಿಂದೂಗಳ ಸಮಾಜಕ್ಕಿಂತ ನಾವು ಮೇಲೆಂದುಕೊಂಡು, ಅವರಂತೆ ಅನೇಕ ದೇವತೆಗಳನ್ನು ವಿಶ್ವಾಸಿಸದೆ ನಾವು ಪ್ರಭುವನ್ನೇ ವಿಶ್ವಾಸಿಸಿದ್ದೇವೆಂದುಕೊಂಡಿದ್ದಾರೆ. ನಾವು ಮಾಡುವ ಆರಾಧನೆ ಸರಿಯಾದುದೆಂದುಕೊಳ್ಳುತ್ತಿದ್ದಾರೆ. ಹಿಂದೂಗಳ ರೀತಿಯಲ್ಲಿ ಅವರನ್ನು ಕೂಡ ಸಾತಾನ್ ಮಭ್ಯಪಡಿಸಿದೆಯೆಂದು ಯಾರಿಗೂ ತಿಳಿದಿಲ್ಲ. ಮಾಯೆ (ಸಾತಾನ್) ಪ್ರಭು ಭಕ್ತರಿಂದ ಪ್ರಭುವನ್ನೇ ಆರಾಧಿಸುತ್ತಿರುವಂತೆ ನಂಬಿಸಿ ತನ್ನಸುತ್ತ ತಿರುಗುವಂತೆ ಮಾಡಿಕೊಂಡಿದೆ. ಮಾಯೆ ತನ್ನ ನಿಜಸ್ವರೂಪವೇನೊ ಯಾರಿಗೂ ತಿಳಿಯದಂತೆ ಎಲ್ಲರಲ್ಲಿಯೂ ಒಳಗೊಂಡಿದೆ. ತನ್ನ ಗುರುತಾದ ಶಿಲುಬೆಯನ್ನೇ ಎಲ್ಲರೂ ಧರಿಸುವಂತೆ ಮಾಡಿದೆ. ಪ್ರಭುವು ಪ್ರಾರ್ಥನಾ ಮಂದಿರಗಳ ಮೇಲೆ ತನ್ನ ಗುರುತುಗಳನ್ನೇ ಸ್ಥಿರಸ್ಥಾಯಿಯಾಗಿ ಇರುವಂತೆ ಮಾಡಿಕೊಂಡಿದೆ. ಈ

ದಿನ ಪ್ರಭುವೇ ಸ್ವತಃವಾಗಿ ಬಂದು ನೀವು ಈ ವಿಧವಾಗಿ ತಪ್ಪು ಮಾಡುತ್ತಾ ಸಾತಾನ್ ವಶವಾಗಿದ್ದೀರೆಂದು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲ. ಹಿಂದೂಗಳಲ್ಲಿ ಮಾಯೆ ಎನ್ನುವುದು, ಕ್ರೈಸ್ತರಲ್ಲಿ ಸಾತಾನ್ ಎನ್ನುವುದು ಎರಡೂ ಒಂದೇ. ದೇವರು ಕೃಷ್ಣನಾಗಿ ಹುಟ್ಟಿದಾಗ ಆತನನ್ನು ಕೂಡ ಎಷ್ಟೋ ತೊಂದರೆಗಳನ್ನಿಟ್ಟಿರುವ ಮಾಯೆ ಅದೇ ದೇವರೇ ಪ್ರಭುವಾಗಿ ಹುಟ್ಟಿದಾಗ ಕೂಡ ಎಷ್ಟೋ ತೊಂದರೆಗಳನ್ನಿಟ್ಟು ಕೊನೆಗೆ ಶಿಲುಬೆ ಮೇಲೆ ಹತ್ಯೆ ಮಾಡಿಸಿದೆ. ಅಷ್ಟೇಅಲ್ಲದೆ ಪ್ರಭುವು ಮರಣಿಸಿದ ದಿನವನ್ನು ಶುಭವಾಗಿ ಅರ್ಥವಾಗುವಂತೆ ಮಾಡಿ, ಆತನು ಬಾಧೆಪಟ್ಟು ಮರಣಿಸಿದ ದಿನವನ್ನು ಶುಭಶುಕ್ರವಾರವಾಗಿ ಪ್ರಭು ಭಕ್ತರನ್ನೇ ನಂಬಿಸಿದೆ. ಒಬ್ಬ ದುರ್ಮಾರ್ಗನು ಮರಣಿಸಿದರೆ ಪ್ರಜೆಗಳು ಸಂತೋಷದಿಂದ ಹಬ್ಬ ಮಾಡಿಕೊಂಡಂತೆ, ಕ್ರೈಸ್ತರಿಂದಲೇ ಗುಡ್‌ಫ್ರೈಡೇ ಹಬ್ಬವನ್ನು ಮಾಡಿಸುತ್ತಿದೆ. ಮೇಲ್ನೋಟಕ್ಕೆ ದೇವರ ಹೆಸರು ಹೇಳುತ್ತಾ ಮಾಯೆ ತನ್ನ ಮಾರ್ಗದಲ್ಲಿ ಎಲ್ಲರೂ ನಡೆಯುವಂತೆ ಮಾಡುತ್ತಿದೆ. ಎಲ್ಲರನ್ನು ಮಭ್ಯಪಡಿಸಿ ನೀನು ನಡೆಯುವುದೇ ಸರಿಯಾದ ದೇವರ ಮಾರ್ಗವೆಂದು ನಂಬಿಸಿ ಹಿಂದಿರುಗಿ ನೋಡದಂತಿರುವುದಕ್ಕೆ ಮಾಡುತ್ತಿದೆ.

ಸಾತಾನ್ ಪ್ರಭಾವದಲ್ಲಿ ಮುಳುಗಿ ಶಿಲುಬೆಯನ್ನು ಧರಿಸಿದ ಕ್ರೈಸ್ತರಿಗೆ ತಿಳಿಯದ ಮುಖ್ಯವಾದ ರಹಸ್ಯವೊಂದು ಇದೆ. ಶಿಲುಬೆ ಹಾಕಿದಾಗ ಯೇಸುಪ್ರಭು ಮರಣಿಸಿದ್ದಾನೆಂದು, ಆತನು ಮೂರನೆದಿನವಾದ ಭಾನುವಾರ ಪುನಃ ಎದ್ದಿದ್ದಾನೆಂದು ಹೇಳುತ್ತಿರುತ್ತಾರೆ. ಆದರೆ ಶಿಲುಬೆ ಮೇಲೆ ಯೇಸು ಮರಣಿಸಲಿಲ್ಲ. ಆತನು ಮರಣಿಸಿದಂತೆ ಕಾಣಿಸಿದ್ದಾನೆ ಹೊರತು ಆತನು ಪೂರ್ತಿ ಮರಣಿಸಲಿಲ್ಲ. ಒಂದು ವಿಧವಾಗಿ ಆತನು ಮರಣಿಸಿದ ಮಾತು ವಾಸ್ತವವೇ ಆದರೂ, ಯೇಸು ಕಾಲಮರಣವನ್ನು ಹೊಂದಲಿಲ್ಲ. ಕಾಲ ಮರಣ, ಅಕಾಲ ಮರಣ, ತಾತ್ಕಾಲಿಕ ಮರಣವೆಂಬ ಮೂರು ವಿಧಗಳ ಮರಣಗಳಲ್ಲಿ ಆಗ ಆತನು ತಾತ್ಕಾಲಿಕ ಮರಣವನ್ನು ಹೊಂದಿದ್ದಾನೆ. ಈ ಮೂರು ಮರಣಗಳ ವಿಷಯಗಳು ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ಮರಣ ರಹಸ್ಯ"** ಎನ್ನುವ ಗ್ರಂಥವನ್ನು

ಓದಬೇಕು. ಯೇಸುಪ್ರಭು ಶುಕ್ರವಾರ ತಾತ್ಕಾಲಿಕ ಮರಣವನ್ನು ಹೊಂದಿ, ಶನಿವಾರ ವಿಶ್ರಾಂತಿ ತೆಗೆದುಕೊಂಡು, ಭಾನುವಾರ ತಿರುಗಿ ಎದ್ದೇಳುವುದು ನಡೆದಿದೆ. ತಾತ್ಕಾಲಿಕ ಮರಣವನ್ನು ಹೊಂದಿದವರು ಉದಯ ಮರಣಿಸಿ ಸಾಯಂಕಾಲ ಎದ್ದವರು ಕೂಡಾ ಇದ್ದಾರೆ. ಎರಡು ದಿನಗಳಿಗೆ, ಮೂರು ದಿನಗಳಿಗೆ ಎದ್ದಿರುವ ಸಂಘಟನೆಗಳು ಎಷ್ಟೋ ಇವೆ. ಯೇಸು ಮೂರನೆ ದಿನ ಎದ್ದು ತಿರುಗಿ ತನ್ನ ಶಿಷ್ಯರ ಹತ್ತಿರಕ್ಕೆ ಹೋಗಿದ್ದಾನೆ. ಆದರೇ ಆ ಸಮಯಕ್ಕೇ ಅವರು ಸಾತಾನು ಪ್ರಭಾವದಲ್ಲಿ ಬಿದ್ದಿರುವುದರಿಂದ ಯೇಸುನನ್ನು ಅವರು ನಂಬಲಿಲ್ಲ. ಆತನು ಮರಣಿಸಿದ್ದಾನೆಂದು ಆತನ ಆತ್ಮ ದೆವ್ವವಾಗಿ ಬಂದಿದೆಯೆಂದು ಅಂದುಕೊಂಡಿದ್ದಾರೆ. ಯೇಸು ನಲವತ್ತು ದಿನಗಳು ತನ್ನ ಶಿಷ್ಯರಿಗೆ ಕೆಲವು ಮಾತುಗಳನ್ನು ಹೇಳಿ ಅವರ ಪ್ರವರ್ತನೆಯನ್ನು ಗಮನಿಸಿದ್ದಾನೆ. ನಂತರ ಅವರನ್ನು ಬಿಟ್ಟು ಭಾರತದೇಶಕ್ಕೆ ಬರುವುದು ನಡೆದಿದೆ. ಹಾಗೆ ಬರುವುದಕ್ಕೆ ಕಾರಣ ತನ್ನ ಗತಜನ್ಮ ಭಾರತ ದೇಶದಲ್ಲಿಯೇ ನಡೆದಿದೆ. ಆದ್ದರಿಂದ ತನ್ನ ಶೇಷ ಜೀವನವನ್ನು ಭಾರತ ದೇಶದಲ್ಲಿನ ಗುಜರಾತ್ ರಾಷ್ಟ್ರದಲ್ಲಿ ಕಳೆದು ಕೊನೆಗೆ ದ್ವಾರಕ ಪ್ರಾಂತದಲ್ಲಿ ಮರಣಿಸುವುದು ನಡೆದಿದೆ.

ಯೇಸು ತನ್ನ ಮರಣದಿಂದ ಎದ್ದ ನಂತರ ನಲವತ್ತು ದಿನಗಳು ತನ್ನ ಶಿಷ್ಯರನ್ನು ಗಮನಿಸಿದ್ದಾನೆ. ಅವರಲ್ಲಿ ಮಾಯೆ (ಸಾತಾನ್) ಪ್ರಭಾವ ಇದೆಯೆಂದು ಗ್ರಹಿಸಿ ಅವರನ್ನು ಬಿಟ್ಟುಬಂದಿದ್ದಾನೆ. ಆಗ ಪ್ರಾರಂಭವಾದ ಮಾಯೆ (ಸಾತಾನ್)ಪ್ರಭಾವ ಕೊನೆಗೆ ಯೇಸು ಆಕಾರವನ್ನು ನೋಡದಂತೆ, ಯೇಸು ಆಕಾರವನ್ನು ಆರಾಧಿಸದಂತೆ ಮಾಡಿ ಶಿಲುಬೆಯನ್ನು ಆರಾಧಿಸುವಂತೆ, ಗೌರವಿಸುವಂತೆ, ಧರಿಸುವಂತೆ ಮಾಡಿದೆ. ಈ ದಿನ ಎಲ್ಲಾ ದೇಶಗಳಲ್ಲಿಯೂ ಕ್ರೈಸ್ತರೆಲ್ಲರೂ ಮುಖ್ಯವಾಗಿ ಶಿಲುಬೆಯನ್ನು ಧರಿಸುತ್ತಿದ್ದಾರೆ. ಮೂರು ವರ್ಷಗಳು ಜ್ಞಾನವನ್ನು ಬೋಧಿಸಿದ ಪ್ರಭುವನ್ನು ಬಿಟ್ಟು ಆತನು ಮರಣಿಸಿದ ಶಿಲುಬೆಯನ್ನು ಧರಿಸುವುದು ನ್ಯಾಯವಾ? ಧರ್ಮವಾ? ಎಂದು ಕೇಳುತ್ತಿದ್ದೇವೆ. ಶಿಲುಬೆ ದೇವರಾ? ಎಂದು ನೇರವಾಗಿ ಪ್ರಶ್ನಿಸುತ್ತಿದ್ದೇವೆ. ಒಂದುಸಲ ಕ್ರೈಸ್ತವ ಮತದಲ್ಲಿನ ಜ್ಞಾನಿಗಳೆಲ್ಲರೂ ಯೋಚಿಸಿ ನೋಡಿರೆಂದು ಕೋರುತ್ತಿದ್ದೇನೆ.

ಕ್ರೈಸ್ತವ ಸೋದರರೇ! ಈಗಾದರೂ ಮೀರಿ ಹೋಗಿರುವುದು ಏನೂ ಇಲ್ಲ. ಅಷ್ಟೋ ಇಷ್ಟೋ ಜೀವನ ಇನ್ನೂ ಉಳಿದಿದೆ. ಇಲ್ಲಿಂದ ಉಳಿದ ಜೀವನದಲ್ಲಾದರೂ ಪ್ರಭುವು ಯಾರು? ಸಾತಾನ್ಯಾರು? ಪ್ರಭು ಮಾರ್ಗ ಯಾವುದು? ಸಾತಾನು ಮಾರ್ಗ ಯಾವುದು? ಪ್ರಸ್ತುತ ನಾನು ಯಾವ ಮಾರ್ಗದಲ್ಲಿ ಇದ್ದೇನೆ? ಎಂದು ಪ್ರಶ್ನಿಸಿಕೊಂಡು, ನಿನ್ನನ್ನು ನೀನು ಹಿಂದಿರುಗಿ ನೋಡಿಕೊಂಡು, ಅಸಲು ದೇವರಾದ ಪ್ರಭುವನ್ನು ವಿಶ್ವಾಸಿಸಿ, ಸಾತಾನ್ ಮಾರ್ಗದಲ್ಲಿ ಪ್ರವೇಶಿಸದಂತೆ ಜಾಗೃತಗೊಳ್ಳಿರಿ. ಹಾಗೆ ಯೋಚಿಸದ ಪಕ್ಷದಲ್ಲಿ ನಾನು ಹೇಳಿರುವವೆಲ್ಲ ಕಲ್ಪಿತಗಳೆಂದು, ಶಿಲುಬೆಯನ್ನೇ ಹೇಳನೆಮಾಡಿದ್ದಾರೆಂದು ಸಾತಾನ್ ನಿನ್ನನ್ನು ಪ್ರೇರೇಪಿಸಿ ನನ್ನ ಮೇಲೆ ಕಳಿಸಬಲ್ಲದು. ದೇವರ ವಿಷಯವನ್ನು ತಿಳಿಸುವುದರಲ್ಲಿ ನಾವು ತೊಂದರೆಪಾಲಾದರೂ ಪರವಾಗಿಲ್ಲ. ದೇವರ ಅವತಾರಕ್ಕೋಸ್ಕರ ಕೆಲಸ ಮಾಡಿದ್ದೇನೆಂಬ ತೃಪ್ತಿ ನಮಗೆ ಉಂಟಾಗುತ್ತದೆ. ನೀನು ಮಾತ್ರ ಸರ್ಪಸಂತಾನವಾಗಬೇಡ, ಕೊಂಡ ಶಿಲುಬೆ ಕೈಯಲ್ಲಿ ಸಿಲುಕಿಕೊಳ್ಳಬೇಡ. ದೇವರು ನಿಮಗೆ ತನ್ನ ವಾಸ್ತವ ಜ್ಞಾನವನ್ನು ನೀಡಬೇಕೆಂದು ಕೋರುತ್ತಾ ಮುಗಿಸುತ್ತಿದ್ದೇವೆ.

| | | |
|---|---|---|
| **ಪ್ರಭು** | **–** | **ಪ್ರತ್ಯೇಕವಾಗಿ ಜನ್ಮಿಸಿದವನು (ದೇವರು)** |
| **ಶಿಲುಬೆ** | **–** | **ಹಾವು (ಸಾತಾನ್)** |
| **ಸರ್ಪ ಸಂತಾನ** | **–** | **ಸಾತಾನ್ ಪ್ರಭಾವವಿರುವ ಪ್ರಜೆಗಳು (ಅಜ್ಞಾನಿಗಳು)** |

**ಅಸತ್ಯವನ್ನು ಸಾವಿರಮಂದಿ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಮಂದಿ ಅಲ್ಲವೆಂದರೂ ಅದು ಅಸತ್ಯವಲ್ಲ.**

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

